# ೂರು ಜಿಲ್ಲೆಯ ಭಿತ್ತಿಚಿತ್ರಕಲೆ

.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಶೋಧನ ಪ್ರಬಂಧ




ಕೆ.ಎಚ್

ಮಾರ್ಗದರ್ಶಕರು
ಡಾ.ಎಸ್.ಸಿ ಪಾಟೀಲ




# ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಪ್ರಬಂಧ)

ಸಂಶೋಧಕರು
**ವೆಂಕಟೇಶ ಕುಮಾರ ಕೆ. ಎಚ್.**

ಮಾರ್ಗದರ್ಶಕರು
**ಡಾ. ಎಸ್. ಸಿ. ಪಾಟೀಲ್**
ವಿಶೇಷಾಧಿಕಾರಿಗಳು
ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ
ಪ್ರಾದೇಶಿಕ ಕಛೇರಿ : ಬೆಂಗಳೂರು



**ದೃಶ್ಯಕಲಾ ವಿಭಾಗ**
ಲಲಿತಕಲಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬
೨೦೧೫





## ಪ್ರಮಾಣ ಪತ್ರ

**ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ** ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದ ಪ್ರಾಧ್ಯಾಪಕರು ಹಾಗೂ ಪ್ರಸ್ತುತ ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯದ ವಿಶೇಷಾಧಿಕಾರಿಗಳಾದ ಡಾ. ಎಸ್. ಸಿ. ಪಾಟೀಲ ಅವರ ಮಾರ್ಗದರ್ಶನದಲ್ಲಿ ಈ ಎಂ.ಫಿಲ್ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಪ್ರಸ್ತುತ ಈ ಸಂಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೩೧.೦೮.೨೦೧೫

ಸ್ಥಳ: ಕ.ವಿ.ವಿ. ವಿದ್ಯಾರಣ್ಯ

**(ವೆಂಕಟೇಶ ಕುಮಾರ ಕೆ. ಎಚ್.)**
ಸಂಶೋಧನ ವಿದ್ಯಾರ್ಥಿ
ದೃಶ್ಯಕಲಾ ವಿಭಾಗ

# ಮಾರ್ಗದರ್ಶಕರ ದೃಢೀಕರಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಯ ದೃಶ್ಯಕಲಾ ವಿಭಾಗದ ಸಂಶೋಧನಾ ವಿದ್ಯಾರ್ಥಿ **ವೆಂಕಟೇಶ ಕುಮಾರ ಕೆ. ಎಚ್.** ಇವರು ಬರೆದು ಸಾದರಪಡಿಸಿದ **ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು, ಇವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಸಂಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಸಂಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಧೃಢೀಕರಿಸಲಾಗಿದೆ.

ದಿನಾಂಕ : ೩೧.೦೮.೨೦೧೫
ಸ್ಥಳ: ಕ.ವಿ.ವಿ. ವಿದ್ಯಾರಣ್ಯ

(ಡಾ. ಎಸ್. ಸಿ. ಪಾಟೀಲ)
ಮಾರ್ಗದರ್ಶಕರು
ವಿಶೇಷಾಧಿಕಾರಿಗಳು
ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ,
ಪ್ರಾದೇಶಿಕ ಕಛೇರಿ : ಬೆಂಗಳೂರು

# ಮುಖ್ಯಸ್ಥರ ದೃಢೀಕರಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಯ ದೃಶ್ಯಕಲಾ ವಿಭಾಗದ ಸಂಶೋಧನಾ ವಿದ್ಯಾರ್ಥಿ **ವೆಂಕಟೇಶಕುಮಾರ ಕೆ. ಎಚ್**. ಇವರು ಬರೆದು ಸಾದರಪಡಿಸಿದ **ರಾಯಚೂರು ಜಿಲ್ಲೆಯ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು, ಇವರು **ಡಾ. ಎಸ್. ಸಿ. ಪಾಟೀಲ** ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಸಂಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಸಂಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಧೃಢೀಕರಿಸಲಾಗಿದೆ. ಹಾಗೂ ವಿಭಾಗದ ಮೂಲಕ ಈ ಸಂಪ್ರಬಂಧವನ್ನು ಮುಂದಿನ ಪರೀಕ್ಷಾ ಪ್ರಕ್ರಿಯೆಗಾಗಿ ಸಲ್ಲಿಸಲಾಗುತ್ತಿದೆ.

ದಿನಾಂಕ : ೩೧.೦೮.೨೦೧೫
ಸ್ಥಳ: ಕ.ವಿ.ವಿ. ವಿದ್ಯಾರಣ್ಯ

**(ಡಾ. ಹೆಬ್ಬಾಲೆ ಕೆ. ನಾಗೇಶ)**
ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ

## ಪರಿವಿಡಿ


Devdurga
ದೇವದುರ್ಗ
Raichur
ರಾಯಚೂರು
Lingsugur
ಲಿಂಗಸೂಗುರ
Manvi
ಮಾನ್ವಿ
Sindhnur
ಸಿಂದನೂರು

ರಾಯಚೂರು ಜಿಲ್ಲೆ ನಕ್ಷೆ

ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ರಾಯಚೂರು ಜಿಲ್ಲೆಯು ಭೌಗೋಳಿಕವಾಗಿ ಐತಿಹಾಸಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದುಕೊಂಡಂತಹ ಪ್ರದೇಶವಾಗಿದೆ. ಈ ನಾಡಿನಲ್ಲಿ ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರ ದೊರೆಗಳು ಮತ್ತು ಬಹಮನಿ ಸುಲ್ತಾನರನ್ನೊಳಗೊಂಡಂತೆ ಅನೇಕ ರಾಜಮಹಾರಾಜರು ಸಂಸ್ಥಾನಿಕರು, ಪಾಳೆಗಾರರು, ದೇಸಾಯಿಗಳು, ಗೌಡರಂತಹ ಸ್ಥಳೀಯನಾಯಕರು ಆಡಳಿತ ಮಾಡಿದ್ದಾರೆ.[೧] ಅವರೆಲ್ಲ ತಮ್ಮ ಆಡಳಿತ ಕಾಲಾವಧಿಯಲ್ಲಿ ಕಲೆ ಮತ್ತು ಸಂಸ್ಕೃತಿಗಳಿಗೆ ಪ್ರೋತ್ಸಾಹ ನೀಡಿ ಅವುಗಳ ಬೆಳವಣಿಗೆಗೆ ಕಾರಣರಾಗಿದ್ದಾರೆ. ಕೆಲವರು ತಮ್ಮ ಅರಮನೆಗಳು, ದೇವಸ್ಥಾನಗಳು, ಸಾರ್ವಜನಿಕ ಕಟ್ಟಡಗಳು, ಮಠಗಳು, ಮಸೀದೆಗಳು ಮುಂತಾದ ಸ್ಥಳಗಳಲ್ಲಿ ವರ್ಣಭಿತ್ತಿಚಿತ್ರಗಳನ್ನು ರಚಿಸುವ ಮೂಲಕ ಅವುಗಳನ್ನು ಅಂದಗೊಳಿಸಿದ್ದಾರೆ. ಕಾಲಮಾನದ ಪ್ರಭಾವ, ಆಧುನಿಕತೆಯ ಮೋಹ, ಧಾರ್ಮಿಕ ವೈಷಮ್ಯಗಳಿಂದಾಗಿ ಹೆಚ್ಚಿನ ಪ್ರಮಾಣದ ಪ್ರಾಚೀನ ಚಿತ್ರಗಳು ನಾಶವಾಗಿ ಹೋಗಿವೆ. ಈ ಜಿಲ್ಲೆಯಲ್ಲಿ ಪ್ರಾಚೀನ ಇತಿಹಾಸ ಪೂರ್ವಕಾಲದ ಆದಿಮಾನವ ಗುಹೆ, ಕಲ್ಲಿನ ಪೊಟರೆಗಳಲ್ಲಿ ರಚಿಸಿದ ಭಿತ್ತಿಚಿತ್ರಗಳು ಕಂಡುಬಂದಿವೆ. ಹಾಗೆಯೇ ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ ರಚನೆಗೊಂಡ ರಾಯಚೂರಿನ ಖಾಜಿನ ಗೌಡರ ಮನೆಯಲ್ಲಿ ಮತ್ತು ಹನುಮಾನ ದೇವಸ್ಥಾನದಲ್ಲಿ ಭಿತ್ತಿಚಿತ್ರಗಳಿರುವ ಕುರುಹುಗಳು

೦೧. ಪುರುಷೋತ್ತಮ ಕೆ.ಎಸ್ : ರಾಯಚೂರು ಜಿಲ್ಲೆ ಪ್ರಾಗೈತಿಹಾಸಿಕ ಚಿತ್ರಕಲೆ. (ಅಪ್ರಕಟಿತ ಬಿ.ಎಫ್.ಎ. ಕಿರುಪ್ರಬಂಧ). ಪು–೧೮

ಇಂದಿಗೂ ಕಂಡುಬರುತ್ತವೆ. ಹೀಗೆ ರಾಯಚೂರು ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ಕಾಲದ ಹಾಗೂ ಶಿಷ್ಟಪದ ಕಾಲದ ಭಿತ್ತಿಚಿತ್ರಗಳ ನೆಲೆಗಳನ್ನು ಕುರಿತು, ಆ ಚಿತ್ರರಚನಾ ವಿಧಿವಿಧಾನಗಳ ಕುರಿತು ಹಾಗೂ ಅವುಗಳ ರಚನೆಯಲ್ಲಿ ಕಂಡುಬರುವ ವಸ್ತುವಿಷಯಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವ ಮಹತ್ವದ ಉದ್ದೇಶವನ್ನು ಈ ಅಧ್ಯಯನವು ಹೊಂದಿದೆ.

ಚಿತ್ರಕಲೆಯ ಇತಿಹಾಸ ಒಂದು ಬಗೆಯಲ್ಲಿ ಮಾನವನ ಸಾಂಸ್ಕೃತಿಕ ಬದುಕಿನ ಘಟ್ಟಗಳನ್ನು ಕಟ್ಟಿಕೊಡುವ ಆಕರವಾಗಿಯೂ ಅನೇಕ ಸಂಗತಿಗಳನ್ನು ಅನಾವರಣಗೊಳಿಸುತ್ತದೆ. ಇದರಿಂದಾಗಿ ಕಲಾಪ್ರಕಾರಗಳ ಅಧ್ಯಯನಗಳನ್ನು ಒಂದು ಪ್ರದೇಶಕ್ಕೆ ಸೀಮಿತಗೊಳಿಸಿ ಅಧ್ಯಯನಕ್ಕೊಳಪಡಿಸಿದಾಗ ಅದರಿಂದ ಇನ್ನಿತರ ಆಕರಗಳಿಗಿಂತ ಭಿನ್ನವಾದ ಹಲವಾರು ಸಂಗತಿಗಳು ತಿಳಿದುಬರುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

**ಅಧ್ಯಯನದ ಉದ್ದೇಶ**

ಭಿತ್ತಿಚಿತ್ರಕಲೆಯು ಚಿತ್ರಕಲಾ ಕ್ಷೇತ್ರದ ಒಂದು ಪ್ರಕಾರವಾಗಿ ಮಹತ್ವ ಪಡೆದುಕೊಂಡಂತೆ ಮಾನವನ ಸಾಂಸ್ಕೃತಿಕ ಬದುಕನ್ನು ರೂಪಿಸುವಲ್ಲಿಯೂ ಅಮೂಲ್ಯ ಪಾತ್ರವಹಿಸಿದೆ. ಭಿತ್ತಿಚಿತ್ರಕಲೆಯು ಆದಿಮಾನವ ಹಂತದಿಂದಲೂ ಮನುಷ್ಯನ ಇರುವಿಕೆಯೊಂದಿಗೆ ಬೆಳೆದು ಬಂದಿದ್ದು, ಆತನ ಬದುಕಿನ ಕಾಲಘಟ್ಟಗಳನ್ನು ಅನುಕ್ರಮವಾಗಿ ಕಟ್ಟಿಕೊಡುವಲ್ಲಿ ಪ್ರಮುಖಪಾತ್ರವಹಿಸುತ್ತದೆ. ಇತಿಹಾಸವನ್ನು ಪುನರ್ ರೂಪಿಸುವಲ್ಲಿ ಇನ್ನಿತರ ಆಕರಗಳಿಗಿಂತ ಭಿನ್ನವಾದ ಸಂಗತಿಗಳನ್ನು ಇದು ತಿಳಿಸುತ್ತದೆ. ಇಂತಹ ಕಲೆಯ ಕುರಿತಾದ ಅಧ್ಯಯನಗಳಿಂದ ನಾಡಿನ ಇತಿಹಾಸ ಆಳ್ವಿಕೆ ಮಾಡಿದ ದೊರೆಗಳು ಅವರು ಅನುಸರಿಸಿದ ಧಾರ್ಮಿಕತೆ, ಸಮಕಾಲಿನ ರಾಜಕೀಯ ಪರಿಸರ, ಸಾಮಾಜಿಕ ವ್ಯವಸ್ಥೆ ಕಲಾಹಿನ್ನೆಲೆ ಮುಂತಾದ ಅನೇಕ ಸಂಗತಿಗಳು ತಿಳಿದುಬರುತ್ತವೆ.

ರಾಯಚೂರು ಜಿಲ್ಲೆಯು ಭವ್ಯಪರಪಂರೆಯನ್ನು ಹೊಂದಿದ ಪ್ರದೇಶವಾಗಿದೆ. ಆದಿಮಾನವ ಹಂತದಿಂದ ಇಂದಿನವರೆಗೂ ಈ ನೆಲದಲ್ಲಿ ಕಲಾಚಟುವಟಿಕೆಗಳು ನಿರಂತರವಾಗಿ ನಡಿಯುತ್ತ ಬಂದಿವೆ. ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರ ಅರಸರು, ಬಹಮನಿ ಸುಲ್ತಾನರು ಮಾತ್ರವಲ್ಲದೆ ಪಾಳೆಗಾರರು, ಸ್ಥಳೀಯನಾಯಕರು ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡುವ ಮೂಲಕ ಜಿಲ್ಲೆಯ ಕಲಾಪರಂಪರೆ ವೈವಿಧ್ಯಮಯವಾಗಿ ರೂಪುಗೊಳ್ಳಲು ಕಾರಣರಾಗಿದ್ದಾರೆ. ಇವರು ಕಟ್ಟಿಸಿದ ಅರಮನೆಗಳು, ರಾಜವಾಡೆಗಳು,

ಮಹಲುಗಳು, ಮಸೀದೆಗಳು, ಮಠಗಳು, ಮಂದಿರಗಳು ಮತ್ತು ಸಾರ್ವಜನಿಕ ಕಟ್ಟಡಗಳು ಕಲಾತ್ಮಕವಾಗಿ ಇಂದಿಗೂ ಉಳಿದುಕೊಂಡಿವೆ. ಇಂತಹ ಹಲವಾರು ಅಂಶಗಳನ್ನು ಅಲ್ಲದೆ ಪ್ರಾಗೈತಿಹಾಸಿಕ ಕಾಲದಿಂದ ಈ ಪ್ರದೇಶದ ಕಲೆಯು ಯಾವರೀತಿಯಲ್ಲಿ ಬೆಳೆದುಬಂದಿತೆಂಬುದನ್ನು ಸಂಕ್ಷಿಪ್ತವಾಗಿ ಕಲಾಹಿನ್ನೆಲೆಯಲ್ಲಿ ಪರಿಶೀಲಿಸಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ರಾಯಚೂರು ಜಿಲ್ಲೆಯಲ್ಲಿ ವ್ಯಾಪಿಸಿಕೊಂಡಿರುವ ಗುಡ್ಡಬೆಟ್ಟಗಳಲ್ಲಿ ಹಲವಾರು ನೆಲೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಚಿತ್ರಗಳಿವೆ. ಕೆಲವು ಚಿತ್ರಗಳು ಬಯಲು ಬಂಡೆಯ ಮೇಲೆ ವರ್ಣರಹಿತವಾಗಿ ರಚನೆಗೊಂಡಿದ್ದರೆ, ಮತ್ತೆ ಕೆಲವು ಶಿಲಾಗುಹೆಗಳಲ್ಲಿ ವರ್ಣಗಳಿಂದ ರಚಿಸಲ್ಪಟ್ಟಿವೆ. ಈ ಎರಡೂ ಪ್ರಕಾರದ ಚಿತ್ರಗಳಲ್ಲಿ ವೈವಿಧ್ಯತೆಗಳಿವೆ. ಬಯಲು ಬಂಡೆಗಳ ಮೇಲೆ ಕುಟ್ಟುವ ಮತ್ತು ಕೊರೆಯುವ ವಿಧಾನಗಳಿಂದ ಚಿತ್ರಗಳನ್ನು ರಚಿಸಿದ್ದರೆ, ಶಿಲಾ ಗುಹೆಗಳಲ್ಲಿ ಬಣ್ಣ ಲೇಪನ ಮಾಡಿದ ಚಿತ್ರಗಳಿವೆ. ಕೆಲವು ನೆಲೆಗಳಲ್ಲಿ ಬಯಲು ಬಂಡೆಯ ಚಿತ್ರಗಳಿದ್ದರೆ, ಮತ್ತೆ ಕೆಲವು ನೆಲೆಗಳಲ್ಲಿ ಕೇವಲ ವರ್ಣಚಿತ್ರಗಳಿವೆ. ಮತ್ತೆ ಹಲವು ಕಡೆ ಈ ಎರಡೂ ಪ್ರಕಾರದ ಭಿತ್ತಿಚಿತ್ರಗಳು ಕಂಡುಬರುತ್ತವೆ. ಈ ಎಲ್ಲ ಭಿತ್ತಿಚಿತ್ರಗಳನ್ನು ವ್ಯವಸ್ಥಿತವಾಗಿ ಅಧ್ಯಯನಕ್ಕೆ ಒಳಪಡಿಸುವ ಪ್ರಮುಖ ಉದ್ದೇಶವು ಈ ಅಧ್ಯಯನದಲ್ಲಿದೆ.

ರಾಯಚೂರು ಜಿಲ್ಲೆಯಲ್ಲಿ ರಾಯಚೂರು, ಮಸ್ಕಿ, ಪಿಕ್ಲಿಹಾಳ, ಮಲದಕಲ್ಲು, ಗಬ್ಬೂರು, ಬೈಲಮರ್ಚಡ್, ಕಲ್ಲೂರು, ಮಲಿಯಾಬಾದ್, ಭಿಲ್ಲಮರಾಯನಗುಡ್ಡ, ಅತನೂರು, ಸಿರವಾರ ಮುಂತಾದ ಕಡೆಗಳಲ್ಲಿ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಿದ್ದು ಅವೆಲ್ಲವುಗಳನ್ನು ಅಧ್ಯಯನಕ್ಕೊಳಪಡಿಸುವ ಉದ್ದೇಶ ಹೊಂದಲಾಗಿದೆ.

ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯ ನಂತರವಾಗಿ ಶಿಷ್ಟಪದ ಭಿತ್ತಿಚಿತ್ರಕಲೆಯು ದೇವಾಲಯ, ಹಸ್ತಪ್ರತಿ, ಶಾಸನಗಳಲ್ಲಿ ಹೀಗೆ ಮುಂತಾದ ಕಡೆಗೆ ಬೆಳೆದುಬಂದಿರುವುದು ಕಂಡುಬರುತ್ತದೆ. ಆದರೆ ದೀರ್ಘ ಕಾಲದ ಅವಧಿಯ ವರ್ಣಚಿತ್ರಗಳು ಸಹಜವಾಗಿ ಪ್ರಕೃತಿಯ ವಿಕೋಪಗಳಿಂದ ನಾಶವಾಗಿ ಇಂದು ಅವುಗಳ ಕುರುಹುಗಳು ಅಲ್ಲಲ್ಲಿ ಉಳಿದಿರುವುದು ಕಂಡುಬರುತ್ತದೆ. ಹೀಗಾಗಿ ಬಹಳ ದೊಡ್ಡ ಅಂತರದಲ್ಲಿ ಈ ಭಿತ್ತಿಚಿತ್ರಗಳ ಪರಂಪರೆಯ ಮುಂದುವರೆದ ಭಾಗವಾಗಿ ರಾಯಚೂರು ಖಾಜಿನ ಗೌಡರ ಮನೆಯಲ್ಲಿ ಶಿಷ್ಟಪದ ಭಿತ್ತಿಚಿತ್ರಗಳು ಕಂಡುಬಂದಿವೆ. ಇವುಗಳ ದಾಖಲೀಕರಣ ಅಧ್ಯಯನವನ್ನು ಮುಂದಿನ ಪೀಳಿಗೆಗಳಿಗೆ ಉಳಿಸುವ ಹಿನ್ನೆಲೆಯಲ್ಲಿ ಸಹ ಪ್ರಸ್ತುತ ಅಧ್ಯಯನವು ಗಮನಹರಿಸುತ್ತದೆ.

ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಮತ್ತು ಶಿಷ್ಟಪದ ಭಿತ್ತಿಚಿತ್ರಗಳ ಲಕ್ಷಣಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಮುಖ್ಯವಾಗಿ ಪ್ರಾಗೈತಿಹಾಸಿಕ ಕಾಲದ ಬಂಡೆಯ ಮೇಲೆ ರಚಿಸಿದ

ವರ್ಣರಹಿತ ಚಿತ್ರಗಳು ಹಾಗೂ ಶಿಲಾಗುಹೆಗಳಲ್ಲಿನ ವರ್ಣಚಿತ್ರಗಳಿಗೆ ಇರುವ ವ್ಯತ್ಯಾಸಗಳನ್ನು ಪರಿಶೀಲಿಸಲಾಗಿದೆ. ಇವುಗಳ ಜೊತೆಗೆ ಶಿಷ್ಟಪದ ಭಿತ್ತಿಚಿತ್ರಗಳ ವಸ್ತುವಿಷಯಗಳು, ತಂತ್ರಗಾರಿಕೆ, ವರ್ಣಲೇಪನ, ಭಿತ್ತಿಸಿದ್ಧತೆ, ಚಿತ್ರರಚನಾ ಹಂತ ಮುಂತಾದವುಗಳ ಕುರಿತಾದ ಪ್ರಮುಖ ಲಕ್ಷಣಗಳನ್ನು ತೌಲನಿಕವಾಗಿ ವಿವೇಚಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ**

**ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ** ಎಂಬ ಶೀರ್ಷಿಕೆಯಡಿಯಲ್ಲಿ ಪ್ರಸ್ತುತ ಸಂಶೋಧನಾಧ್ಯಯನವು ಸಿದ್ಧಗೊಂಡಿದ್ದು, ಅಧ್ಯಯನದ ಅನುಕೂಲತೆಗಾಗಿ ಇಲ್ಲಿ ಒಟ್ಟು ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ.

ಅಧ್ಯಾಯ : ಒಂದು – **ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ**

ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ ಮುಂತಾದ ಅಂಶಗಳನ್ನು ಚರ್ಚಿಸುವುದರೊಂದಿಗೆ ಅಧ್ಯಯನದ ಸ್ಪಷ್ಟ ಉದ್ದೇಶಗಳನ್ನು ನಿರೂಪಿಸಲಾಗಿದೆ.

ಅಧ್ಯಾಯ : ಎರಡು – **ರಾಯಚೂರು ಜಿಲ್ಲೆಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ನೆಲೆ-ಹಿನ್ನೆಲೆ**

ರಾಯಚೂರು ಜಿಲ್ಲೆಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ನೆಲೆ-ಹಿನ್ನೆಲೆಯನ್ನು ವಿಶೇಷವಾಗಿ ವಿವಿಧ ಆಧಾರಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ : ಮೂರು – **ಭಿತ್ತಿಚಿತ್ರಕಲೆಯ ಅರ್ಥ, ಸ್ವರೂಪ ಮತ್ತು ಬೆಳವಣಿಗೆಯ ಐತಿಹಾಸಿಕತೆ**

ಈ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯ ಅರ್ಥ, ಸ್ವರೂಪವನ್ನು ಚರ್ಚಿಸುವುದರೊಂದಿಗೆ ಭಿತ್ತಿಚಿತ್ರಕಲೆ ಬೆಳೆದು ಬಂದ ಐತಿಹಾಸಿಕ ಸ್ಥೂಲನೋಟವನ್ನು ಇಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಅಧ್ಯಾಯ : ನಾಲ್ಕು – **ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆ**

ರಾಯಚೂರು ಜಿಲ್ಲೆಯು ಪ್ರಾಗೈತಿಹಾಸಿಕ ಕಾಲದ ಮಾನವನು ಚಿತ್ರಿಸಿರುವ ಅನೇಕ ಚಿತ್ರಗಳು ಈ ಜಿಲ್ಲೆಯಲ್ಲಿ ಕಂಡುಬಂದಿದ್ದು, ಅವುಗಳನ್ನು ಅಧ್ಯಯನದ ಅನುಕೂಲತೆಗಾಗಿ ಇಲ್ಲಿ ಪ್ರಾಗೈತಿಹಾಸಿಕ ಕಾಲದ ಬಯಲು ಬಂಡೆಯ ಚಿತ್ರಗಳು ಮತ್ತು ಶಿಲಾಗುಹೆಗಳಲ್ಲಿನ ಚಿತ್ರಗಳು ಎಂದು ವಿಂಗಡಿಸಿಕೊಂಡು

ಅಧ್ಯಯನ ಮಾಡಲಾಗಿದೆ. ಹಾಗೆಯೇ ಈ ಎರಡು ವಿಧಗಳ ಚಿತ್ರಗಳಲ್ಲಿ ಕಂಡುಬರುವ ವರ್ಣ ಮತ್ತು ವರ್ಣ ರಹಿತ ಚಿತ್ರಗಳೆಂದು ವಿಭಾಗಿಸಿಕೊಂಡು ವಿವೇಚಿಸಲಾಗಿದೆ.

ಅಧ್ಯಾಯ : ಐದು – **ರಾಯಚೂರು ಜಿಲ್ಲೆಯ ಶಿಷ್ಟಪದ ಭಿತ್ತಿಚಿತ್ರಕಲೆ**

ರಾಯಚೂರು ಜಿಲ್ಲೆಯ ಶಿಷ್ಟಪದ ಭಿತ್ತಿಚಿತ್ರಕಲೆ ಎಂಬ ಈ ಅಧ್ಯಾಯದಲ್ಲಿ ಖಾಜಿನಗೌಡರ ಮನೆಯ ಭಿತ್ತಿಚಿತ್ರಗಳನ್ನು ಮತ್ತು ಹನುಮಾನ ಮಂದಿರದ ಭಿತ್ತಿಚಿತ್ರಗಳನ್ನು ವಿಶೇಷವಾಗಿ ವಸ್ತುವಿಷಯ ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ : ಆರು – **ಪ್ರಾಗೈತಿಹಾಸಿಕ ಮತ್ತು ಶಿಷ್ಟಪದ ಭಿತ್ತಿಚಿತ್ರಗಳ ವೈವಿಧ್ಯತೆ**

ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರ ಮತ್ತು ಶಿಷ್ಟಪದ ಭಿತ್ತಿಚಿತ್ರಗಳ ವೈವಿಧ್ಯತೆಯ ಕುರಿತು ಮತ್ತು ಸಾಮ್ಯ–ವೈಷಮ್ಯತೆಗಳನ್ನು ಕುರಿತು ಈ ಅಧ್ಯಾಯದಲ್ಲಿ ತೌಲನಿಕವಾಗಿ ವಿವೇಚಿಸಲಾಗಿದೆ.

ಅಧ್ಯಾಯ : ಏಳು – **ಸಮಾರೋಪ**

ಪ್ರಸ್ತುತ ಈ ಅಧ್ಯಾಯವು ಸಮಾರೋಪವಾಗಿದ್ದು, ಈ ಅಧ್ಯಾಯದಲ್ಲಿ ಮೇಲಿನ ಎಲ್ಲಾ ಅಧ್ಯಾಯಗಳಿಂದ ಕಂಡುಬರುವ ಪ್ರಮುಖ ಫಲಿತಗಳನ್ನು ಸಮೀಕ್ಷಿಸುವ ಕಾರ್ಯ ಮಾಡಲಾಗಿದೆ.

**ಪ್ರಸ್ತುತ ಶೀರ್ಷಿಕೆಗೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳ ಸಮೀಕ್ಷೆ**

೧೯೬೮ರಲ್ಲಿ ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರು **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**[೨] ಎಂಬ ಕೃತಿಯಲ್ಲಿ ಕರ್ನಾಟಕದ ಭಿತ್ತಿಚಿತ್ರ ಪರಂಪರೆಯನ್ನು ಹಾಗೂ ಅವುಗಳ ನೆಲೆಗಳನ್ನು ಉದಾರಿಸುತ್ತ ಚರ್ಚಿಸಿದ್ದಾರೆ.

೧೯೭೩ರಲ್ಲಿ ನಿರಂಜನ ಅವರ ಸಂಪಾದಯನೆಯಲ್ಲಿ ಹೊರಬಂದ **ಜ್ಞಾನಗಂಗೋತ್ರಿ ಸಂಪುಟ–೫– ಕಲೆ ಮತ್ತು ಸಾಹಿತ್ಯ**[೩] ಎಂಬ ಕೃತಿಯಲ್ಲಿ ಕರ್ನಾಟಕದಲ್ಲಿನ ಭಿತ್ತಿಚಿತ್ರಗಳ ನೆಲೆಗಳು, ಭಿತ್ತಿಚಿತ್ರ ಸಿದ್ಧತೆ, ಚಿತ್ರರಚನಾ ಕ್ರಮ, ಬಣ್ಣಗಾರಿಕೆ ಹಾಗೂ ಭಿತ್ತಿಚಿತ್ರಗಳ ವಸ್ತುವಿಷಯ ಕುರಿತು ಮಾಹಿತಿಗಳು ದೊರೆಯುತ್ತವೆ.

೧೯೮೩ರಲ್ಲಿ ಬಿ.ವಿ.ಕೆ. ಶಾಸ್ತ್ರಿಯವರು ಬರೆದ **ಕರ್ನಾಟಕದ ಭಿತ್ತಿಚಿತ್ರಕಲೆ**[೪] ಎಂಬ ಕೃತಿಯಲ್ಲಿ

---

೦೨. ಡಾ. ಹೆಚ್. ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಕೃಷ್ಣಮೂರ್ತಿಪುರಂ, ಮೈಸೂರು. ೧೯೬೮

೦೩. ನಿರಂಜನ (ಸಂ.) : ಜ್ಞಾನಗಂಗೋತ್ರಿ (ಸಂಪುಟ–೫, ಕಲೆ ಮತ್ತು ಸಾಹಿತ್ಯ), ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೩

೦೪. ಬಿ.ವಿ.ಕೆ. ಶಾಸ್ತ್ರಿ : ಕರ್ನಾಟಕದ ಭಿತ್ತಿಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೧೯೮೩

ಕರ್ನಾಟಕದ ಭಿತ್ತಿಚಿತ್ರಗಳ ನೆಲೆಗಳು ಮತ್ತು ಅವುಗಳ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೀಡಿದ್ದಾರೆ. ಇದೇ ಅವಧಿಯಲ್ಲಿ ಕೆ. ಆರ್. ಬಸವರಾಜ್ ಅವರ **Finearts, History and Culture of Karnataka**[೫] ಎಂಬ ಗ್ರಂಥದಲ್ಲಿ ಕರ್ನಾಟಕದ ಭಿತ್ತಿಚಿತ್ರಗಳ ಬಗ್ಗೆ ಸಾಂದರ್ಭಿಕವಾಗಿ ಹೇಳಿದ್ದಾರೆ.

೧೯೮೬ರಲ್ಲಿ ಪಿ. ಆರ್. ತಿಪ್ಪೇಸ್ವಾಮಿ ಅವರು ಬರೆದ **ಕರ್ನಾಟಕದ ಚಿತ್ರಕಲೆ**[೬] ಎಂಬ ಲೇಖನವು ಅವಲೋಕನ ಎಂಬ ಸಂಪಾದನಾ ಗ್ರಂಥದಲ್ಲಿ ಪ್ರಕಟಗೊಂಡಿದ್ದು, ಈ ಲೇಖನದಲ್ಲಿ ಕರ್ನಾಟಕದ ಭಿತ್ತಿಚಿತ್ರಕಲೆಯ ಬಗ್ಗೆ ಕಿರುನೋಟ ಹರಿಸುತ್ತದೆ.

೧೯೯೧ರಲ್ಲಿ ಎಸ್. ಸಿ. ಪಾಟೀಲ ಅವರು **ಕರ್ನಾಟಕ ಜನಪದ ಚಿತ್ರಕಲೆ**[೭] ಎಂಬ ಮಹಾಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ಈ ಮಹಾಪ್ರಬಂಧವು ಚಿತ್ರಕಲೆಯ ಕುರಿತು ಬಂದ ಮೊದಲ ಮಹಾಪ್ರಬಂಧವಾಗಿದೆ. ಈ ಮಹಾಪ್ರಬಂಧದಲ್ಲಿ ಉತ್ತರ ಕರ್ನಾಟಕದ ಭಿತ್ತಿಚಿತ್ರಗಳ ನೆಲೆಗಳು ಹಾಗೂ ಅವುಗಳ ವಸ್ತುವಿಷಯಗಳು ಕುರಿತು ಸ್ಥೂಲವಾಗಿ ವಿವರಿಸಿದ್ದಾರೆ.

೧೯೯೩ರಲ್ಲಿ ಪ್ರಕಟವಾದ ೬೨ನೇ ಕನ್ನಡ ಸಾಹಿತ್ಯ ಸಮ್ಮೇಳನದ **ತಿರುಳ್ಗನ್ನಡ ಸ್ಮರಣ ಸಂಚಿಕೆ**[೮]ಯಲ್ಲಿ ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ವಿವರಣೆ ಇದೆ.

೧೯೯೭ರಲ್ಲಿ ಪಿ. ಆರ್. ತಿಪ್ಪೇಸ್ವಾಮಿ ಅವರ ಸಂಪಾದನೆಯಲ್ಲಿ **ಕಲಾಕೋಶ**[೯] ಎಂಬ ಕೃತಿಯನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯವರು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಕರ್ನಾಟಕದ ಭಿತ್ತಿಚಿತ್ರಗಳ ಕುರಿತು ಮಾಹಿತಿ ಇದೆ.

೧೯೯೫ರಲ್ಲಿ ಡಾ. ಅ. ಸುಂದರ ಅವರ **ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ**[೧೦] ಎಂಬ ಕೃತಿಯು ಪ್ರಕಟಗೊಂಡಿದ್ದು, ಈ ಕೃತಿಯಲ್ಲಿ ಕರ್ನಾಟಕದ ಪಾಗೈತಿಹಾಸಿಕ ಚಿತ್ರಗಳ ಕುರಿತು ಸ್ಥೂಲವಾಗಿ ವಿವೇಚಿಸಿದ್ದಾರೆ.

---

೦೫. K. R. Basavaraj : Fineart, History and Culture of Karnataka, Dharwad. 1983
೦೬. ಪಿ. ಆರ್. ತಿಪ್ಪೇಸ್ವಾಮಿ (ಲೇ) : ಕರ್ನಾಟಕದ ಚಿತ್ರಕಲೆ (ಅವಲೋಕನ), ವಿಶ್ವಕನ್ನಡ ಸಮ್ಮೇಳನ, ಮೈಸೂರು. ೧೯೮೬
೦೭. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೧
೦೮. ತಿರುಳ್ಗನ್ನಡ (ಸ್ಮರಣ ಸಂಚಿಕೆ), ೬೨ನೇ ಕನ್ನಡ ಸಾಹಿತ್ಯ ಸಮ್ಮೇಳನ, ಕೊಪ್ಪಳ. ೧೯೯೩
೦೯. ಪಿ. ಆರ್. ತಿಪ್ಪೇಸ್ವಾಮಿ (ಸಂ.) : ಕಲಾಕೋಶ, ಕರ್ನಾಟಕ ಲಲಿಕತಲಾ ಅಕಾಡೆಮಿ, ಬೆಂಗಳೂರು. ೧೯೯೭
೧೦. ಡಾ. ಅ. ಸುಂದರ : ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೧೯೯೫

೧೯೯೮ರಲ್ಲಿ ಡಾ. ಅ. ಲ. ನರಸಿಂಹನ್ ಅವರು ಬರೆದ **ಕರ್ನಾಟಕದ ಭಿತ್ತಿಚಿತ್ರಕಲಾ ಪರಂಪರೆ**[೧೧] ಎಂಬ ಕೃತಿಯನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯವರು ಪ್ರಕಟಿಸಿದ್ದಾರೆ. ಇಲ್ಲಿ ಕರ್ನಾಟಕದ ಭಿತ್ತಿಚಿತ್ರಕಲೆಯ ಇತಿಹಾಸ ಕುರಿತು ಸ್ಥೂಲವಾಗಿ ಅಧ್ಯಯನ ಮಾಡಿದ್ದಾರೆ.

೨೦೦೦ರಲ್ಲಿ ಯಾದಪ್ಪ ಪರದೇಶಿಯವರು **ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ – ಒಂದು ಅಧ್ಯಯನ**[೧೨]ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಉತ್ತರ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಕಂಡುಬರುವ ಭಿತ್ತಿಚಿತ್ರಗಳ ಕುರಿತು ಸ್ಥೂಲವಾಗಿ ಅಧ್ಯಯನ ಮಾಡಲಾಗಿದೆ.

೨೦೦೩ರಲ್ಲಿ ಡಾ. ಎಸ್. ಸಿ. ಪಾಟೀಲರು ಮತ್ತು ಸತ್ಯಾನಂದ ಪಾತ್ರೋಟ ಅವರ ಸಂಪಾದನೆಯಲ್ಲಿ ಹೊರಬಂದ ಡಾ. ಬಿ. ಕೆ. ಹಿರೇಮಠ ಅವರ ಅಭಿನಂದನಾ ಗ್ರಂಥವಾದ **ನಿಜದನೆಲೆ**[೧೩] ಎಂಬ ಕೃತಿಯಲ್ಲಿ ಕರ್ನಾಟಕದ ಭಿತ್ತಿಚಿತ್ರಕಲೆಗೆ ಸಂಬಂಧಿಸಿದ ಲೇಖನಗಳು ಸಂಗ್ರಹಗೊಂಡಿವೆ.

೨೦೦೫ರಲ್ಲಿ ಡಾ. ಮೃತ್ಯುಂಜಯ ಹೊರಕೇರಿ ಮತ್ತು ಡಾ. ಬಸವಲಿಂಗ ಸೊಪ್ಪಿಮಠ ಅವರ ಸಂಪಾದನೆಯಲ್ಲಿ ಬಂದ **ರಾಯಚೂರು ಜಿಲ್ಲಾ ದರ್ಶನ**[೧೪] ಎಂಬ ಕೃತಿಯಲ್ಲಿ ರಾಯಚೂರು ಜಿಲ್ಲೆಯ ಐತಿಹಾಸಿಕ ಹಿನ್ನೆಲೆ, ಶಿಕ್ಷಣ, ರಾಜಕೀಯ, ಸಂಗೀತ, ಜನಪದ ಕಲೆಗಳು ಹೀಗೆ ಮುಂತಾದ ಅಂಶಗಳ ಕುರಿತು ಲೇಖನಗಳು ಸಂಗ್ರಹಗೊಂಡಿವೆ.

೨೦೦೬ರಲ್ಲಿ ಜಾವಿದ್ ಹುಸೇನ್‌ರವರು **ಅಂದದ ಅರಮನೆಯ ಚಂದದ ಚಿತ್ರಗಳು**[೧೫] ಎಂಬ ಕಿರುಪ್ರಬಂಧವನ್ನು ಎಂ.ವಿ.ಎ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ರಾಯಚೂರಿನ ಖಾಜಿನ ಗೌಡರ ಅರಮನೆಯಲ್ಲಿನ ಭಿತ್ತಿಚಿತ್ರಗಳ ಕುರಿತು ಚರ್ಚಿಸಲಾಗಿದೆ. ಇದೇ ಅವಧಿಯಲ್ಲಿ ಪುರುಷೋತ್ತಮ ಕೆ. ಎಸ್. ಅವರು **ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ**[೧೬]

---

೧೧. ಡಾ. ಅ. ಲ. ನರಸಿಂಹನ್ : ಕರ್ನಾಟಕದ ಭಿತ್ತಿಚಿತ್ರಕಲಾ ಪರಂಪರೆ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೧೯೯೮

೧೨. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ – ಒಂದು ಅಧ್ಯಯನ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೧೩. ಡಾ. ಎಸ್. ಸಿ. ಪಾಟೀಲ & ಸತ್ಯಾನಂದ ಪಾತ್ರೋಟ (ಸಂ.) : ನಿಜದನೆಲೆ, ಡಾ. ಬಿ. ಆರ್. ಹಿರೇಮಠ ಅವರ ಅಭಿನಂದನಾ ಗ್ರಂಥ, ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಾಗಲಕೋಟ. ೨೦೦೩

೧೪. ಡಾ. ಮೃತ್ಯುಂಜಯ ಹೊರಕೇರಿ & ಡಾ. ಬಸವಲಿಂಗ ಸೊಪ್ಪಿಮಠ : ರಾಯಚೂರು ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೫. ಜಾಪಿದ್ ಹುಸೇನ್ : ಅಂದದ ಅರಮನೆಯ ಚಂದದ ಚಿತ್ರಗಳು, ಅಪ್ರಕಟಿತ ಎಂ.ವಿ.ಎ ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

೧೬. ಪುರುಷೋತ್ತಮ ಕೆ. ಎಸ್. : ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಅಪ್ರಕಟಿತ, ಬಿ.ವಿ.ಎ. ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಕೇಂದ್ರ ಬಾದಾಮಿ ಬನಶಂಕರಿ ೨೦೦೬

ಎಂಬ ಕಿರುಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ.ವಿ.ಎ ಪದವಿಗಾಗಿ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ ಕುರಿತು ಸಂಕ್ಷಿಪ್ತ ಮಾಹಿತಿ ಇದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆಯ ವ್ಯಾಪ್ತಿಯನ್ನು ಹೊಂದಿದ್ದರೂ ಪೂರಕವಾಗಿ ರಾಯಚೂರೇತರ ಪ್ರದೇಶದ ವಿವಿಧ ರಾಜ್ಯಗಳಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ಮತ್ತು ಶಿಷ್ಟಪದ ಭಿತ್ತಿಚಿತ್ರಗಳನ್ನು ಸಾಂದರ್ಭಿಕವಾಗಿ ಅಲ್ಲಲ್ಲಿ ಬಳಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ವೈಧಾನಿಕತೆ**

ಈ ಪ್ರಬಂಧದ ರಚನೆಗಾಗಿ ಮೂಲ ಆಕರ ಸಾಮಗ್ರಿ ಮತ್ತು ಆನುಷಂಗಿಕ ಆಕರ ಸಾಮಾಗ್ರಿ ಎಂಬ ಎರಡು ರೀತಿಯ ಆಕರಗಳಿಂದ ವಿಷಯ ಸಂಗ್ರಹ ಮಾಡಿಕೊಂಡು ಪ್ರಬಂಧ ರಚನೆ ಮಾಡುವ ವಿಧಾನ ಅನುಸರಿಸಲಾಗಿದೆ.

೧. ಮೂಲ ಆಕರ ಸಾಮಗ್ರಿ

೨. ಆನುಷಂಗಿಕ ಆಕರ ಸಾಮಗ್ರಿ

**೧. ಮೂಲ ಆಕರ ಸಾಮಗ್ರಿ**

ಮೂಲ ಆಕರ ಸಾಮಗ್ರಿಯಾಗಿ ರಾಯಚೂರಿನ ಖಾಜಿನಗೌಡರ ವಾಡೆಯಲ್ಲಿರುವ ಮತ್ತು ಹನುಮಾನ ಮಂದಿರದಲ್ಲಿರುವ ಮೂಲಚಿತ್ರಗಳನ್ನೆ ಆಯ್ದುಕೊಳ್ಳಲಾಗಿದೆ. ಅಲ್ಲದೆ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯ ಅಧ್ಯಯನದ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯಲ್ಲಿ ಹರಡಿಕೊಂಡಿರುವ ಗುಡ್ಡ ಬೆಟ್ಟಗಳಲ್ಲಿನ ಬಂಡೆಯ ಮೇಲೆ ರಚಿಸಿದ ವರ್ಣರಹಿತ ಚಿತ್ರಗಳು ಮತ್ತು ಶಿಲಾಗುಹೆಗಳ ವರ್ಣಚಿತ್ರಗಳನ್ನು ಮೂಲ ಆಕರಗಳಾಗಿ ಅಧ್ಯಯನಕ್ಕೊಳಪಡಿಸಲಾಗಿದೆ.

**೨. ಆನುಷಂಗಿಕ ಆಕರ ಸಾಮಾಗ್ರಿ :**

ಆನುಷಂಗಿಕ ಆಕರ ಸಾಮಾಗ್ರಿಯಾಗಿ ಅನೇಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಆಯ್ಕೆಮಾಡಿಕೊಂಡಿರುವ ವಿಷಯಕ್ಕೆ ಸಂಬಂಧಪಟ್ಟಂತೆ ಮತ್ತು ಪೂರಕವಾಗಿ ಈಗಾಗಲೇ ಪ್ರಕಟಗೊಂಡಿರುವ ಸಂಶೋಧನಾ ಪ್ರಬಂಧಗಳು, ಅಪ್ರಕಟವಾಗುಳಿದಿರುವ ಪ್ರಬಂಧಗಳು, ಲೇಖನಗಳು, ಪುಸ್ತಕಗಳು,

ಸ್ಮರಣಸಂಚಿಕೆಗಳು ಪತ್ರಿಕಾಲೇಖನಗಳನ್ನು ಆನುಷಂಗಿಕ ಆಕರ ಸಾಮಾಗ್ರಿಯಾಗಿ ಬಳಸಿಕೊಳ್ಳಲಾಗಿದೆ. ಇದಲ್ಲದೆ ವಿಶ್ವಕೋಶಗಳು, ನಿಘಂಟುಗಳು, ಗ್ಯಾಝಿಟೀಯರಗಳು, ಶಬ್ದಕೋಶಗಳು, ವಿಷಯ ವಿಶ್ವಕೋಶಗಳು, ಗ್ರಂಥಸೂಚಿಗಳು ಹೀಗೆ ಹಲವಾರು ಪ್ರಕಟಿತ ಮತ್ತು ಅಪ್ರಕಟಿತ ಕೃತಿಗಳನ್ನು ಆನುಷಂಗಿಕವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಜೊತೆಗೆ ಕಲಾವಿದರು ರಚಿಸಿದ ಕಲಾಕೃತಿಗಳು, ಕಲಾಪ್ರದರ್ಶನಗಳು, ಕಲಾಶಿಬಿರಗಳು, ವಿಚಾರ ಸಂಕಿರಣಗಳು, ಕಲಾಉಪನ್ಯಾಸಗಳಿಗೆ ಭೇಟಿ ನೀಡುವ ಮೂಲಕ ಅಲ್ಲಿ ಸಂಗ್ರಹವಾದ ಪೂರಕವಾದ ಮಾಹಿತಿಗಳನ್ನು ಆನುಷಂಗಿಕ ಆಕರ ಸಾಮಾಗ್ರಿಯಾಗಿ ಬಳಸಿಕೊಂಡು ವಿಷಯ ಸಂಗ್ರಹ ಮಾಡಿಕೊಳ್ಳುವ ವಿಧಾನ ಅನುಸರಿಸಲಾಗಿದೆ.

ಒಟ್ಟಾರೆ ಪ್ರಸ್ತುತ ಅಧ್ಯಯನವನ್ನು ಕ್ಷೇತ್ರಕಾರ್ಯ ವಿಧಾನದಿಂದ ಪ್ರಧಾನವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ ಮತ್ತು ಸಂದರ್ಶನಗಳ ಮೂಲಕವೂ ಅಧ್ಯಯನಕ್ಕೆ ಬೇಕಾದ ಮಾಹಿತಿಗಳನ್ನು ಪಡೆದು ಈ ಅಧ್ಯಯನವನ್ನು ಮಾಡಲಾಗಿದೆ.

❑❑❑

ಅಧ್ಯಾಯ – ಎರಡು

## ರಾಯಚೂರು ಜಿಲ್ಲೆಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ನೆಲೆ–ಹಿನ್ನೆಲೆ

ಸಂಸ್ಕೃತಿ ಮತ್ತು ನಾಗರಿಕತೆಯ ದೃಷ್ಟಿಯಿಂದ ಕರ್ನಾಟಕ ರಾಜ್ಯದ ಚರಿತ್ರೆಯಲ್ಲಿ ರಾಯಚೂರು ಜಿಲ್ಲೆಯು ವಹಿಸಿದ ಪಾತ್ರವು ನಿಜಕ್ಕೂ ಮಹತ್ವಪೂರ್ಣವಾಗಿದೆ. ರಾಯಚೂರು ಜಿಲ್ಲೆ ಕೃಷ್ಣತುಂಗೆಯರ ಮಂಗಳ–ಅಂಗಳ ದೋ–ಅಬ್ ಎಂದು ಪ್ರತೀತಿ ಪಡೆದಪ್ರದೇಶ. ದೋ–ಅಬ್ ಎಂದರೆ ಎರಡು ನದಿಗಳ ನಡುವಿನ ಭೂ ಪ್ರದೇಶ.[೧] ಈ ಜಿಲ್ಲೆಯು ಉತ್ತರ ಭಾಗದಲ್ಲಿ ಕಲಬುರ್ಗಿ, ಪಶ್ಚಿಮದಲ್ಲಿ ವಿಜಾಪುರ,ಹಾಗೂ ಧಾರವಾಡ ಪೂರ್ವದಲ್ಲಿ ಆಂಧ್ರಪ್ರದೇಶ ಹಾಗೂ ದಕ್ಷಿಣದಲ್ಲಿ ಆಂಧ್ರ ಮತ್ತು ಬಳ್ಳಾರಿ ಜಿಲ್ಲೆಗಳಿಂದ ಆವೃತವಾಗಿದೆ. ಕೃಷ್ಣಾ ನದಿಯು ಈ ಜಿಲ್ಲೆಯ ಉತ್ತರ ಹಾಗೂ ತುಂಗಭದ್ರ ನದಿಯ ದಕ್ಷಿಣ ಮೇರೆಗಳಾಗಿವೆ. ಕರ್ನಾಟಕದ ಈಶಾನ್ಯ ಭಾಗವು ಬಂಡೆಗಲ್ಲುಗಳ ಬೆಟ್ಟಗಳಿಂದ, ಗಿಡಮರಗಳಿಂದ ಬಯಲು ಭೂಮಿಯಿಂದ ಒಣಹವೆ ಹಾಗೂ ಕಪ್ಪು ಮಣ್ಣಿನಿಂದ ಕೂಡಿದ ಪ್ರದೇಶವಾಗಿದೆ. ಈ ಪ್ರಾಗೈತಿಹಾಸ ಕಾಲದ ಸಂಸ್ಕೃತಿಯನ್ನು ರಾಯಚೂರು, ಲಿಂಗಸೂರು, ಮಸ್ಕಿ, ಭಿಲ್ಲಮರಾಯನಗುಡ್ಡ, ಪಿಕ್ಲಿಹಾಳ, ಕಲ್ಲೂರು, ತಾವರಗೆರೆ, ಅತನೂರು, ಮಾನ್ವಿ ಮುಂತಾದವುಗಳಲ್ಲಿ ಗುರುತಿಸಲಾಗಿದೆ.[೨] ಮಸ್ಕಿ ಮತ್ತು ಪಿಕ್ಲಿಹಾಳ ಸ್ಥಳಗಳಲ್ಲಿ ಉತ್ಖನನದಲ್ಲಿ ಅನೇಕ ಶಿಲಾಯುಗದ ಸಂಸ್ಕೃತಿಯ ಮಡಿಕೆಯ ಚೂರುಗಳು ಮತ್ತು ಮಡಿಕೆಯ ಮೇಲೆ ಚಿತ್ರಗಳನ್ನು ರಚಿಸಿರುವುದು ದೊರೆತಿವೆ. ರಾಯಚೂರು ಜಿಲ್ಲೆಯು

೦೧. ಪ್ರೊ. ಷೇಕ್ ಅಲಿ (ಸಂ.) : ಕರ್ನಾಟಕ ಚರಿತ್ರೆ, ಸಂಪುಟ–೪, ಪು–೧೦೨

೦೨. ಡಾ. ಮೃತ್ಯುಂಜಯ ಹೊರಕೇರಿ & ಡಾ. ಬಸವಲಿಂಗ ಸೊಪ್ಪಿಮಠ (ಸಂ.) : ರಾಯಚೂರು ಜಿಲ್ಲಾ ದರ್ಶನ, ಪು–೨೬

ರಾಯಚೂರು, ಮಾನ್ವಿ, ಸಿಂಧನೂರ, ಲಿಂಗಸಗೂರು, ದೇವದುರ್ಗ ಎಂಬ ಐದು ತಾಲೂಕು ಹೊಂದಿದೆ. ರಾಯಚೂರು ಸೇರೆದಂತೆ ಇಲ್ಲಿ ದೊಡ್ಡ ದೊಡ್ಡ ಬಂಡೆಗಲ್ಲುಗಳನ್ನು ಹೊತ್ತ ಬೆಟ್ಟಗಳು ನದಿ, ಹಳ್ಳಗಳಿಂದ ಕೂಡಿದ ಸಮೃದ್ಧ ಈ ಪ್ರದೇಶವಾಗಿದೆ. ಇಲ್ಲಿನ ಭೂ ಪ್ರದೇಶ ವಾಯುವ್ಯದಿಂದ ಆಗ್ನೇಯದ ಕಡೆಗೆ ಇಳಿಜಾರಾಗಿದೆ. ಇಲ್ಲಿನ ನದಿಗಳು, ಹಳ್ಳಗಳು, ಈ ದಿಕ್ಕಿಗೆ ಅನುಗುಣವಾಗಿ ಹರಿಯುತ್ತಿವೆ. ಜಿಲ್ಲೆಯಲ್ಲಿ ಕಪ್ಪು ಜೇಡಿ ಮಣ್ಣು ಪ್ರದಾನವಾಗಿದೆ. ಅಲ್ಲಲ್ಲಿ ಕೆಂಪು ಮಣ್ಣು ಇದೆ. ಇಲ್ಲಿಯ ಮಣ್ಣು ಫಲವತ್ತತೆಯಿಂದ ಕೂಡಿದೆ.

ಜಿಲ್ಲೆಯಲ್ಲಿ ಖನಿಜ ನಿಕ್ಷೇಪಗಳು ಹೇರಳವಾಗಿಲ್ಲ. ಪರಿಣಾಮವಾಗಿ ಕೈಗಾರಿಕೆಗಳು ಕಡಿಮೆ ದೇವಸಗೂರಿನ ಶಕ್ತಿನಗರದಲ್ಲಿ ರಾಯಚೂರು ಶಾಖೋತ್ಪನ್ನ ವಿದ್ಯುತ್‌ಸ್ಥಾವರ, ಹಟ್ಟಿಯ ಚಿನ್ನದ ಗಣಿ ಇವು ಈ ಜಿಲ್ಲೆಯಲ್ಲಿವೆ. ಭಾರತ ಸರಕಾರ ಕೇಂದ್ರ ಅಂಕಿ ಸಂಖ್ಯೆಗಳ ಪ್ರಕಾರ ರಾಯಚೂರು ಜಿಲ್ಲೆಯ ಭೌಗೋಳಿಕ ವಿಸ್ಥಾರವು ೧೪.೦೧೭ ಕಿ.ಮೀ. ಅಂದರೆ ೫೪೧೦ ಚದರ ಮೈಲುಗಳಾಗಿವೆ. ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿ ಭೂ ವಿಸ್ಥಾರದಲ್ಲಿ ರಾಯಚೂರು ಪ್ರದೇಶವು ಮೂರನೇ ಸ್ಥಾನವನ್ನು ಹೊಂದಿದೆ.[೩] ರಾಯಚೂರು ಪ್ರದೇಶ ಸಮುದ್ರ ಪಾತಳಿ ೧೩೧೧ ಅಡಿ ಎತ್ತರದಲ್ಲಿ ಇರುತ್ತದೆ.

ರಾಯಚೂರು ಜಿಲ್ಲೆಯ ಇತಿಹಾಸವು ಪ್ರಾಗೈತಿಹಾಸಿಕ ಕಾಲದಿಂದ ಆರಂಭವಾಗುತ್ತದೆ. ಜಿಲ್ಲೆಯ ಅನೇಕ ಕಡೆಗಳಲ್ಲಿ ಆದಿ ಮಾನವ ನೆಲೆಗಳು ಗುರುತಿಸಲ್ಪಟ್ಟಿವೆ. ಜಿಲ್ಲೆಯಲ್ಲಿ ಬೃಹತ ಶಿಲಾಯುಗ, ಸೂಕ್ಷ್ಮ ಶಿಲಾಯುಗ, ನವ ಶಿಲಾಯುಗ, ತಾಮ್ರಯುಗ ಮತ್ತು ಕಬ್ಬಿಣಯುಗದ, ಸಂಸ್ಕೃತಿಗಳು ಬೆಳಕಿಗೆ ಬಂದಿವೆ.[೪] ಇಲ್ಲಿ ಕೈಯಿಂದ ಮಾಡಿದ ಬೂದು ಬಣ್ಣದ ಮಡಿಕೆಗಳು, ತಿಗರಿಯಿಂದ ಮಾಡಿದ ಕಪ್ಪು ಹಾಗೂ ಕಂದುಗೆಂಪಿನ ಮಡಿಕೆಗಳು ಮಣ್ಣಿನ ಆಟಿಕೆ ವಸ್ತುಗಳು, ಶಿಲಾ ಉಪಕರಣಗಳು, ವಿವಿಧ ಬಗೆಯ ಬೃಹತ ಶಿಲಾಗೋರಿ ಮೊದಲಾದವುಗಳು ಕಂಡುಬಂದಿವೆ. ಮಸ್ಕಿಯಲ್ಲಿ ದೊರೆತ ಹೇರಳ ಮಣಿಗಳಿಂದಾಗಿ ಅಲ್ಲೊಂದು ಮಣಿ ತಯಾರಿಕೆ ಕೇಂದ್ರವಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುವುದಲ್ಲದೆ[೫] ಅಲ್ಲಿ ಚಿನ್ನದ ಬಳಕೆ ಇತ್ತೆಂಬುದಾಗಿ ನಂಬಿದ್ದಾರೆ. ಅಲ್ಲದೆ ಸಿಂಧೂ ಬಯಲಿನಲ್ಲಿ ಹರಪ್ಪ ಮೆಹೆಂಜೋದಾರದೊಂದಿಗೆ ಸಂಪರ್ಕ ಹೊಂದಿತ್ತೆಂಬ ಅಭಿಪ್ರಾಯ ಪಟ್ಟಿದ್ದಾರೆ. "ಮಾನ್ವಿ ತಾಲೂಕಿನ ಕಲ್ಲೂರಿನಲ್ಲಿ ತಾಮ್ರದ ಕೊಡಲಿ ಮತ್ತು ಭರ್ಚಿ ದೊರೆತಿವೆ. ವಟಗಲ್‌ನಲ್ಲಿ ಇತ್ತೀಚಿನ ಸಂಶೋಧನೆ ಹಲವು ತಾಮ್ರದ ವಸ್ತುಗಳನ್ನು ಸಂಗ್ರಹಿಸಿಲಾಗಿದೆ.

---

೦೩. ಡಾ. ಮೃತ್ಯುಂಜಯ ಹೊರಕೇರಿ & ಡಾ. ಬಸವಲಿಂಗ ಸೊಪ್ಪಿಮಠ (ಸಂ.) : ರಾಯಚೂರು ಜಿಲ್ಲಾ ದರ್ಶನ, ಪು-೨೮

೦೪. ಪುರುಷೋತ್ತ ಕೆ. ಎಸ್. : ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿ ಚಿತ್ರಕಲೆ, ಪು-೧೮

೦೫. ಡಾ. ಅ. ಸುಂದರ : ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ, ಪು-೩೧

ಮಹಾಕಾವ್ಯಗಳೊಂದಿಗೆ ರಾಯಚೂರು ಜಿಲ್ಲೆಯು ಸಂಬಂಧ ಹೊಂದಿದ್ದ ಬಗ್ಗೆ ನಂಬಿಕೆಗಳಿವೆ. ಬಭ್ರುವಾಹನನ ರಾಜಧಾನಿಯಾದ ಮಣಿಪುರ, ದೇವದುರ್ಗ ತಾಲೂಕಿನ ಗಬ್ಬೂರ ಎಂಬುದಾಗಿ ಸ್ಥಳೀಯ ಪ್ರತೀತಿ ಇದೆ. ಅಲ್ಲಿಯ ಜನರು ಕಂಬವೊಂದನ್ನು ತೋರಿಸಿ ಅದು "ಧರ್ಮರಾಯನ ಅಶ್ವಮೇಧ" ಕುದುರೆಯನ್ನು ಕಟ್ಟಿಹಾಕಿದ ಕಂಬವೆಂದು ಹೇಳುತ್ತಾರೆ.

ಇತಿಹಾಸದ ಕಾಲಕ್ಕೆ ಮರಳಿದರೆ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳ ಪಾತ್ರ ಮಹತ್ವದಾಗಿದೆ. ಜಿಲ್ಲೆಯ ಶಾಸನಗಳನ್ನು ಮೊದಲು ಬಾರಿಗೆ ಗಮನಿಸಿದ ಶ್ರೇಯಸ್ಸು"ಕರ್ನಲ್ ಮೆಕೆಂಝಿ"(ಕ್ರಿ.ಶ.೧೭೮೯–೧೮೩೪)ರವರಿಗೆ ಸಲ್ಲುತ್ತದೆ. ಜಿಲ್ಲೆಯ ಶಾಸನಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ವಹಿಸಿದ ಇನ್ನೊಬ್ಬ ಮಹನೀಯರೆಂದರೆ ಡಾ.ಪಿ.ಬಿ. ದೇಸಾಯಿ. ಹೈದ್ರಾಬಾದ್ ಪುರಾತತ್ವ ಇಲಾಖೆ, ಆಂಧ್ರಪ್ರದೇಶದ ಪುರಾತತ್ವ ಇಲಾಖೆ ಪ್ರಕಟಿಸಿದ ಕೆಲವು ಸಂಪುಟಗಳು ರಾಯಚೂರು ಜಿಲ್ಲೆಗೆ ಸಂಬಂಧಿಸಿವೆ. ಶ್ರೀನಿವಾಸ ರಿತ್ತಿ ಮತ್ತು ಬಾ.ರಾ. ಗೋಪಾಲರು ಲಿಂಗಸೂರು ಮತ್ತು ಮಾನ್ವಿ ತಾಲೂಕುಗಳಲ್ಲಿ ಕ್ಷೇತ್ರಕಾರ್ಯ ಮಾಡಿ ಅವುಗಳ ಮಾಹಿತಿಯನ್ನು ಭಾರತ ಪುರಾತತ್ವ ಇಲಾಖೆಯ ವರದಿಗಳಲ್ಲಿ ಪ್ರಕಟಿಸಿದ್ದಾರೆ.[೬]

**ರಾಯಚೂರು ಹೆಸರಿನ ಹಿನ್ನೆಲೆ**

ಪ್ರದೇಶವೊಂದರ ಚರಿತ್ರೆಯಲ್ಲಿ ಆ ಪ್ರದೇಶದ ಹೆಸರಿನ ಹಿನ್ನೆಲೆ, ಐತಿಹ್ಯಗಳು, ಸ್ಥಳೀಯವಾಗಿ ಕರೆಯುವ ಬಗೆಯನ್ನು ಗಮನಿಸಬಹುದಾಗಿದೆ. ರಾಯಚೂರು ಪ್ರದೇಶದ ಹೆಸರು. ಐತಿಹ್ಯ ಮತ್ತು ಹಿನ್ನೆಲೆಗಳಿಗೆ ಶಾಸನಗಳು ಪ್ರಮುಖ ಆಕರಗಳಾಗಿ ಕಂಡುಬರುತ್ತವೆ. ಐತಿಹ್ಯದ ಪ್ರಕಾರ ಮೊಲವೊಂದು ನಾಯಿಯನ್ನು ಅಟ್ಟಿಸಿಕೊಂಡು ಹೋಗಿ ಅದನ್ನು ಹೊಡೆದು ಚೂರು ಮಾಡಿತು ಆದ್ದರಿಂದ "ನಾಯಿ ಚೂರು" ಎಂದು ಈ ಸ್ಥಳಕ್ಕೆ ಕರೆಯುವುದು ವಾಡಿಕೆಯಾಯಿತೆಂದು[೭] ತಿಳಿದುಬರುತ್ತದೆ. ನಂತರದಲ್ಲಿ ರಾಯಚೂರು ಆಗಿರಬೇಕು.

ಈ ಪ್ರದೇಶ ಕಲ್ಲುಗುಡ್ಡಗಳಿಂದ ಕೂಡಿದೆ. ಸಣ್ಣ ಪ್ರಮಾಣದ ಕಲ್ಲುಗಳು ಹೇರಳವಾಗಿದೆ. ತೆಲುಗಿನಲ್ಲಿ "ರಾಯಿ" ಎಂದರೆ ಕಲ್ಲುಚೂರು ಎಂದರ್ಥವಾಗುತ್ತದೆ. ತೆಲುಗಿನ ಪ್ರಭಾವದಿಂದ ಈ ಪ್ರದೇಶಕ್ಕೆ ರಾಯಚೂರು ಎಂಬ ಹೆಸರು ಬಂದಿರಬಹುದು[೮] ಎಂಬ ಮತ್ತೊಂದು ಅಭಿಪ್ರಾಯವಿದೆ.

ಈ ಪ್ರದೇಶದಲ್ಲಿ ದೊರೆತ ಕಲ್ಲಿನ ಆಯುಧಗಳು ತುಂಬ ಚಿಕ್ಕವು. ಸಣ್ಣ ಕಲ್ಲಿನ ಹಾಗೆ ನೀಳವಾದ,

೦೬. ಡಾ. ಮೃತ್ಯುಂಜಯ ಹೊರಕೇರಿ & ಡಾ. ಬಸವಲಿಂಗ ಸೊಪ್ಪಿಮಠ (ಸಂ.) : ರಾಯಚೂರು ಜಿಲ್ಲಾ ದರ್ಶನ, ಪು-೨೯
೦೭. ಎಚ್. ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು-೨೦೧
೦೮. ಡಾ. ಮೃತ್ಯುಂಜಯ ಹೊರಕೇರಿ & ಡಾ. ಬಸವಲಿಂಗ ಸೊಪ್ಪಿಮಠ (ಸಂ.) : ರಾಯಚೂರು ಜಿಲ್ಲಾ ದರ್ಶನ, ಪು-೩೦

ಹರಿತವಾದ ಬದಿಯುಳ್ಳ ಕಲ್ಲಿನ ಚಕ್ಕೆಗಳು ಇಂದಿನ ಕಬ್ಬಿಣದ ಚೂರಿನಂತೆ ಇದ್ದಿರಬೇಕು. ಒಂದು ಬದಿ ಮೊಂಡು ಮಾಡಿದ ಉದ್ದನೆಯ ಚಕ್ಕೆಗಳೂ ಇದ್ದಿರಬೇಕು. ಕಲ್ಲಿನಿಂದ ಸಿದ್ಧಪಡಿಸಿದ ದೊಡ್ಡ ಪ್ರಮಾಣದ ಚೂರಿಯಾಕಾರದ ಕಲ್ಲುಗಳು ಕಂಡುಬಂದ ಹಿನ್ನೆಲೆಯಲ್ಲಿ "ರಾಚೂರು" ರಾಯಚೂರು ಎಂದು ಹೆಸರು ಬಂದಿರಬೇಕೆಂದು[೦೯] ಕೆಲವರು ಊಹಿಸಿದ್ದಾರೆ.

ಕೃಷ್ಣಾ ಮತ್ತು ತುಂಗಭದ್ರ ನದಿಗಳ ಸಂಗಮ ಸ್ಥಳದಲ್ಲಿ ಆದಿಮಾನವ ಬಳಸಿದ ಕೊಡಲಿ, ಭರ್ಚಿಯಾಕಾರದ ಕಲ್ಲಿನ ಚೆಕ್ಕೆಗಳು ಕಂಡುಬರುತ್ತವೆ. ಅವು ಕಾವೇರಿ ನದಿಯ ಬಯಲು ಪ್ರದೇಶವನ್ನು ಬಿಟ್ಟರೆ "ರಾಯಚೂರು ದೋ ಅಬ್" ಪ್ರದೇಶದ ಸಂಗಮದ ಬಯಲು ಪ್ರದೇಶದಲ್ಲಿ ವಿಪುಲವಾಗಿವೆ. ಮಹಾರಾಷ್ಟ್ರ ವ್ಯಾಪಾರ ಮಾರ್ಗವೊಂದು, ಕೃಷ್ಣಾ ತುಂಗಭದ್ರ ನದಿಗಳ ನಡುವಿನಿಂದ ಹಾದು ವಿಜಯನಗರ, ಹರಿಹರ ಮತ್ತು ಮೈಸೂರು ಮೂಲಕ ಕಾವೇರಿ ನದಿ ಬಯಲಿಗೆ ಸಂಪರ್ಕವನ್ನು ಪಡೆದಿರುವುದು ಗಮನಾರ್ಹ ಸಂಗತಿ.

ಈ ವ್ಯಾಪಾರಿ ಮಾರ್ಗ ಮಧ್ಯದಲ್ಲಿ ರಾಯಚೂರು ಇದೆ. ಅವರು ತಮ್ಮ ರಕ್ಷಣೆಗಾಗಿ ಇಲ್ಲಿ ಸಿಗುವ ಕೊಡಲಿ, ಭರ್ಚಿಯಾಕಾರದ ಕಲ್ಲಿನ ಚೆಕ್ಕೆಗಳನ್ನು ಬಳಸುತ್ತಿರಬೇಕು. ಚೆಕ್ಕೆ, ಕಲ್ಲಿನ ರಾಶಿ ಇಲ್ಲಿರಬೇಕು. ವ್ಯಾಪಾರಿಗಳು ತೆಲುಗಿನವರೇ ಅಧಿಕ ಸಂಖ್ಯೆಯವರಾಗಿರಬೇಕು. ಹಾಗಾಗಿ ಅವರು ಕಲ್ಲಿನ ಚೆಕ್ಕೆಗಳಿರುವ ಈ ಸ್ಥಳವನ್ನು 'ರಾಚೂರು" ಎಂದು ಕರೆದಿರಬೇಕು. ಬೇಲೂರು ತಾಲೂಕಿನ ೧೧೬೧ನೇ ಇಸ್ವಿ ಹಾಗೂ ಒಂದನೇ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದ ಹುಲಿಕೆರೆ ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನ ದೊರೆಯು ಗೆದ್ದುಕೊಂಡ ಸ್ಥಳಗಳಲ್ಲಿ "ರಾಚವೂರು" ಒಂದಾಗಿತ್ತೆಂದು ತಿಳಿಸಲಾಗಿದೆ.

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ೧೧೬೮ನೇ ಇಸ್ವಿ ಹಾಗೂ ಎರಡನೇ ಬಲ್ಲಾಳನ ಕಾಲಕ್ಕೆ ಸಂಬಂಧಿಸಿದ ಹಾಟ್ನಾ ಶಾಸನವು ವಿಷ್ಣುವರ್ಧನನು ಗೆದ್ದುಕೊಂಡ ಕೋಟೆಗಳಲ್ಲಿ "ಪುರ್ಮನರಾಚವೂರ" ಮುಖ್ಯವಾಗಿತ್ತೆಂದು ಹೇಳಲಾಗಿದೆ.

ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ೧೧೮೭ನೇ ಇಸ್ವಿ ಹೊಯ್ಸಳರ ಹಿರೇಹಳ್ಳಿ ಶಾಸನವು "ರಾಚನೂರು" ವಿಷ್ಣುವರ್ಧನನು ಗೆದ್ದುಕೊಂಡ ಸ್ಥಳಗಳಲ್ಲಿ ಒಂದಾಗಿತ್ತೆಂದು ತಿಳಿಸಿದೆ. ಈ ಶಾಸನಗಳಿಂದ "ರಾಚವೂರ" ಈಗಿನ ರಾಯಚೂರು ಆಗಿತ್ತೆಂದು ತಿಳಿದುಬರುತ್ತದೆ.

೧೩ನೇ ಶತಮಾನದಲ್ಲಿ ರಾಚವೂರು ಅಥವಾ ರಾಚನೂರು ಮೊಟಕುಗೊಂಡು ರಾಚೂರು

೦೯. ಡಾ. ಮೃತ್ಯುಂಜಯ ಹೊರಕೇರಿ & ಡಾ. ಬಸವಲಿಂಗ ಸೊಪ್ಪಿಮಠ (ಸಂ.) : ರಾಯಚೂರು ಜಿಲ್ಲಾ ದರ್ಶನ, ಪು-೩೧

ಎಂದು ಪ್ರಸಿದ್ಧಿಗೆ ಬಂದಿತ್ತು. ಈ ವಿಷಯವು ಕಾಕತೀಯ ದೊರೆ ಎರಡನೇ ಪ್ರತಾಪರುದ್ರನ ಕಾಲದ ರಾಯಚೂರು ಕೋಟೆಯ ಮೇಲೆ ಇರುವ ೧೨೯೪ನೇ ಇಸ್ವಿಯ ಶಾಸನದಿಂದ ಖಚಿತವಾಗಿದೆ. ಈ ಶಾಸನದಲ್ಲಿ ಈ ಸ್ಥಳಕ್ಕೆ “ರಾಚೂರು” ಎಂದು ಕರೆಯಲಾಗಿದೆ.

ರಾಚೂರು ಎಂಬ ಹೆಸರು ಈ ಜಿಲ್ಲೆಗೆ ವಿಜಯನಗರ ಕಾಲದಲ್ಲಿಯೂ ಮುಂದುವರೆದಿತ್ತು. ಆಂಧ್ರಪ್ರದೇಶದ ಮೆಹಬೂಬ ನಗರ ಜಿಲ್ಲೆಯ ಅಲಮ್‌ಪುರದ ಎರಡು ಕನ್ನಡ ಶಾಸನಗಳು ಕೃಷ್ಣದೇವರಾಯನು ತನ್ನ ಉತ್ತರದ ದಿಗ್ವಿಜಯದಲ್ಲಿ “ರಾಚೂರ”ನ್ನು ಗೆದ್ದುಕೊಂಡಿದ್ದನೆಂದು ತಿಳಿಸುತ್ತವೆ.

ಈ ಐತಿಹಾಸಿಕ ಹೆಸರು ‘ರಾಚೂರು” ಅನೇಕ ಬದಲಾವಣೆಗಳನ್ನು ಹೊಂದಿ “ರಾ” ಮತ್ತು “ಚೂರು”ಗಳ ಮಧ್ಯೆ “ಯ” ಸೇರಿಕೊಂಡು ರಾಯಚೂರಾಗಿ ಮಾರ್ಪಾಡಾಗಿದೆ. “ರಾಯ” ಅಂದರೆ “ರಾಜ” ರಾಯಚೂರು ಅಂದರೆ ರಾಜನ ಊರು ಎಂಬ ಅರ್ಥವನ್ನು ಹೊಂದಿದೆ. ಈ ಸ್ಥಳವು ಬಹಳ ಮುಖ್ಯವಾದ ಊರಾಗಿತ್ತೆಂಬುದು ತಿಳಿದುಬರುತ್ತದೆ. “ಹಿಂದಿ” ಹಾಗೂ “ಉರ್ದು” ಭಾಷೆಯಲ್ಲಿ “ರಾಯ” ಪದಕ್ಕೆ ಸಮನಾದ ಪದವು “ರೈ” ಎಂಬುದಾಗಿದೆ.[೧೦] ಉರ್ದು ಭಾಷೆಯ ಪ್ರಭಾವದಿಂದ ಈ ಸ್ಥಳಕ್ಕೆ ‘ರೈಚೂರು’ ಹೆಸರು ಬಳಕೆಯಲ್ಲಿ ಬಂದಿರಬಹುದು.

ರಾಯಚೂರಿನ ಇತಿಹಾಸವು ಸುಮಾರು ಕ್ರಿ.ಪೂ. ೨೦೦೦ ವರ್ಷಗಳಷ್ಟು ಪ್ರಾಚೀನವಾಗಿದ್ದು ಹಳೆ ಹಾಗೂ ಹೊಸ ಶಿಲಾಯುಗ ಸಂಸ್ಕೃತಿಗಳನ್ನು ಬೆಳೆಸಿಕೊಂಡು ಬಂದ ಹೆಮ್ಮೆಯನ್ನು ಹೊಂದಿದೆ. ಕೃಷ್ಣಾ ಹಾಗೂ ತುಂಗಭದ್ರಾ ನದಿಗಳ ನಡುವಿನ ಫಲವತ್ತಾದ ಪ್ರದೇಶವಾದ ರಾಯಚೂರು ಜಿಲ್ಲೆ ಅನಾದಿ ಕಾಲದಿಂದಲೂ ಮಾನವನ ವಾಸಸ್ಥಳವಾಗಿತ್ತು. ಭಾರತದ ಶಿಲಾಯುಗ ಸಂಸ್ಕೃತಿಯ ಸಂಶೋಧನೆಯಲ್ಲಿ ಮೊದಲಿಗರಾದ ಬ್ರೂಸ್‌ಪುಟ್” ಎಂಬುವವರು ರಾಯಚೂರು ಜಿಲ್ಲೆಯಲ್ಲಿ ಅನೇಕ ಹೊಸ ಶಿಲಾಯುಗ ಸಂಸ್ಕೃತಿಯ ಸ್ಥಳಗಳನ್ನು ಕ್ರಿ.ಶ. ೧೮೮೦ರ ಸುಮಾರಿಗೆ ಕಂಡುಹಿಡಿದಿದ್ದಾರೆ.[೧೧] ಅಲ್ಲದೇ ಅನೇಕ ಪಳೆಯುಳಿಕೆಗಳನ್ನು ಸಂಗ್ರಹಿಸಿದ್ದಾರೆ.

೧೯೦೪ರಲ್ಲಿನ ಅದನ್ನು ಮದ್ರಾಸ್ ಸರಕಾರವು ಖರೀದಿಸಿ ಅಲ್ಲಿಯ ಐತಿಹಾಸಿಕ ವಸ್ತುಸಂಗ್ರಹಾಲಯಕ್ಕೆ ಸೇರಿಸಿತ್ತು. ರಾಯಚೂರು ಜಿಲ್ಲೆಯಲ್ಲಿ ಶಿಲಾಯುಗ ಸಂಸ್ಕೃತಿಯನ್ನು ದೇವದುರ್ಗ, ಲಿಂಗಸೂಗೂರಿನ ಪಿಕ್ಕಿಹಾಳ, ಮಾನ್ವಿಯ ಬಯಲು ಮರ್ಚೆಡ ಹಾಗೂ ಸಿಂಧನೂರು, ತಾಲೂಕುಗಳಲ್ಲಿ ಗುರುತಿಸಲಾಗಿದೆ.

೧೦. ಪುರುಷೋತ್ತಮ ಕೆ. ಎಸ್. : ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಪು-೨೮
೧೧. ಡಾ. ಅ. ಸುಂದರ : ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ, ಪು-೩೫

ರಾಯಚೂರು ಜಿಲ್ಲೆಯ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ರಾಯಚೂರು "ನಂದರ" ಆಳ್ವಿಕೆಗೂ ಒಳಪಟ್ಟಿತ್ತೆಂದು ಹೇಳಲಾಗಿದೆ. ಈ ಜಿಲ್ಲೆಯಲ್ಲಿ ಅಶೋಕನ ಶಾಸನಗಳು ಲಿಂಗಸೂಗೂರ ತಾಲೂಕಿನ ಮಸ್ಕಿಯಲ್ಲಿ ದೊರೆತಿವೆ. ಕ್ರಿ.ಶ. ೧೯೧೫ರಲ್ಲಿ ಬೇಡನ್ ಎಂಬ ಇಂಜನಿಯರರು ಮಸ್ಕಿಯ ಶಾಸನವನ್ನು ಶೋಧಿಸಿದ್ದಾರೆ. "ದೇವನಾಂಪ್ರಿಯ" ಅಶೋಕನ ಹೆಸರನ್ನು ಹೊಂದಿದ ಮಸ್ಕಿ ಶಾಸನವು ವಿಶೇಷ ಮಹತ್ವವನ್ನು ಪಡೆದಿದೆ.[೧೨] ಕ್ರಿ.ಶ. ೫ನೇ ಶತಮಾನದಲ್ಲಿ ರಾಯಚೂರು ಜಿಲ್ಲೆ ಬನವಾಸಿಯ ಕದಂಬರ ಆಡಳಿತಕ್ಕೆ ಒಳಪಟ್ಟಿತ್ತೆಂದು ಶಾಸನಗಳಿಂದ ತಿಳಿದುಬಂದಿದೆ. ಕರಡಿಕಲ್ ಶಾಸನವು ಮುದಗಲ್ ಹಾಗೂ ಕರಡಿಕಲ್ಲುಗಳು ಕದಂಬರ ಆಡಳಿತಕ್ಕೆಒಳಪಟ್ಟಿದ್ದನ್ನು ತಿಳಿಸುತ್ತದೆ.

ಬಾದಾಮಿಯ ಚಾಲುಕ್ಯರೂ ರಾಯಚೂರು ಜಿಲ್ಲೆಯ ಪ್ರದೇಶಗಳಲ್ಲಿ ಆಡಳಿತವನ್ನು ನಡೆಸಿದ್ದರು. ಐಹೊಳೆ ಶಾಸನವು ಎರಡನೇ ಪುಲಕೇಶಿಯು ಪಲ್ಲವರನ್ನು ಸೋಲಿಸಿ ರಾಯಚೂರನ್ನು ವಶಪಡಿಸಿಕೊಂಡಿದ್ದನೆಂದು ತಿಳಿಸಿದೆ.

ಬಾದಾಮಿಯ ಚಾಲುಕ್ಯರ ನಂತರ ಮಳಖೇಡದ ರಾಷ್ಟ್ರಕೂಟರು ಕರ್ನಾಟಕದಲ್ಲಿ ಸಾರ್ವಭೌಮ ದೊರೆಗಳಾದ ಅಧಿಕಾರಕ್ಕೆ ಬಂದರು. ಅಮೋಘವರ್ಷನು ರಾಷ್ಟ್ರಕೂಟರ ಪ್ರಸಿದ್ಧ ದೊರೆ. ಇವನ ಆಶ್ರಯದಲ್ಲಿ ಶ್ರೀವಿಜಯ ಎಂಬ ಕವಿಯು ಪ್ರಸಿದ್ಧ "ಕವಿರಾಜಮಾರ್ಗ" ಎಂಬ ಗ್ರಂಥವನ್ನು ರಚಿಸಿದ್ದನು.[೧೩] ಈ ಗ್ರಂಥದಲ್ಲಿ ಹಿಂದಿನ ರಾಯಚೂರು ಜಿಲ್ಲೆಗೆ ಸೇರಿದ್ದ ಕೊಪ್ಪಳವನ್ನು "ಕೊಪಣ ಮಹಾನಗರ" ಎಂದು ವರ್ಣಿಸಿದೆ.

ಕ್ರಿ.ಶ. ೯೭೩ರ ಸುಮಾರಿಗೆ ರಾಷ್ಟ್ರಕೂಟದ ಕೊನೆಯ ಅರಸನಾದ ಎರಡನೇ ಕರ್ಕನನ್ನು ಸೋಲಿಸಿ ಚಾಲುಕ್ಯ ಎರಡನೇ ತೈಲಪನು ಕಲ್ಯಾಣದಲ್ಲಿ ತನ್ನ ಸಾರ್ವಭೌಮ ಅಧಿಕಾರವನ್ನು ಸ್ಥಾಪಿಸಿದನು. ಕಲ್ಯಾಣದ ಚಾಲುಕ್ಯರ ಅನೇಕ ಶಾಸನಗಳು ರಾಯಚೂರು ಜಿಲ್ಲೆಯಲ್ಲಿ ದೊರೆತಿವೆ. ಎರಡನೇ ಜಯಸಿಂಹನ ಎರಡು ಶಾಸನಗಳು ಮಸ್ಕಿಯಲ್ಲಿ ದೊರೆತಿವೆ. ಸೋಮೇಶ್ವರನ ಶಾಸನವು ಮಾನ್ವಿಯಲ್ಲಿ, ಕಲ್ಯಾಣದ ಚಾಲುಕ್ಯರ ಪ್ರಸಿದ್ಧ ಅರಸನಾದ ಆರನೇ ವಿಕ್ರಮಾದಿತ್ಯನ ಶಾಸನಗಳು ರಾಯಚೂರು ಜಿಲ್ಲೆಯ ಅನೇಕ ಕಡೆಗಳಲ್ಲಿ ದೊರೆಕಿವೆ.

ಕಲ್ಯಾಣದ ಚಾಲುಕ್ಯರ ಕೊನೆಯ ಅರಸನಾದ ೩ನೇ ತೈಲಪನನ್ನು ಕಾಕತೀಯ ಪ್ರೋಲನು ಸೆರೆ

೧೨. ಪ್ರೊ. ಷೇಕ್ ಅಲಿ (ಸಂ.) : ಕರ್ನಾಟಕ ಚರಿತ್ರೆ, ಸಂಪುಟ-೪, ಪು-೨೮೦
೧೩. ಎಚ್. ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು-೨೦೧

ಹಿಡಿದಿದ್ದಾಗ ಎರಡನೇ ಬಿಜ್ಜಳನು ಕಲ್ಯಾಣವನ್ನು ಕೈವಶಮಾಡಿಕೊಂಡಿದ್ದನು. ಬಿಜ್ಜಳನು ಕಲಚೂರಿ ರಾಜ್ಯದ ಪ್ರಸಿದ್ಧ ದೊರೆ.ಇವನು ಸಹ ರಾಯಚೂರು ಜಿಲ್ಲೆಯನ್ನು ಆಳಿದ್ದನು. ಇವನ ೩ ಶಾಸನಗಳು ಜಿಲ್ಲೆಯಲ್ಲಿ ದೊರೆತಿವೆ.

ದೇವಗಿರಿಯ ಯಾದವರು ಸಹ ರಾಯಚೂರನ್ನು ಆಳಿದ್ದರೆಂದು ಶಾಸನಗಳಿಂದ ಗೊತ್ತಾಗಿದೆ. ಯಾದವ ಅರಸನಾದ ಸಿಂಘಣನ ನಾಲ್ಕು ಶಾಸನಗಳು[೧೪] ರಾಯಚೂರು ಜಿಲ್ಲೆಯಲ್ಲಿ ಕಂಡುಬಂದಿದೆ. ರಾಯಚೂರು ಜಿಲ್ಲೆಯ ಇತಿಹಾಸದ ಮುಖ್ಯ ಘಟನೆ ಎಂದರೆ ಅದು ವರಂಗಲ್‌ದ ಕಾಕತಿಯರ ಆಡಳಿತಕ್ಕೆ ಒಳಪಟ್ಟಿದ್ದು. ಕಾಕತೀಯ ಅರಸ ಎರಡನೇ ಪ್ರತಾಪ ರುದ್ರನ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ.೧೨೯೪ನೇ ವರ್ಷದ ಶಾಸನವು ರಾಯಚೂರಿನ ಕೋಟೆಯ ಮೇಲೆ ದೊರತಿದೆ. ಈ ಶಾಸನವು ರಾಯಚೂರು ಕೋಟೆಯನ್ನು ಇವನು ನಿರ್ಮಿಸಿದನೆಂದು ತಿಳಿಸುತ್ತದೆ. ರಾಯಚೂರು ಇತಿಹಾಸದಲ್ಲಿ ಇನ್ನೊಂದು ಮುಖ್ಯ ಘಟನೆ ಎಂದರೆ ವಿಜಯನಗರ ಸಾಮ್ರಾಜ್ಯದ ಆಡಳಿತ, ವಿಜಯನಗರ ಹಾಗೂ ಬಹುಮನಿ ಅರಸರು ಫಲವತ್ತಾದ ರಾಯಚೂರು ಪ್ರದೇಶದ ಅಧಿಪತ್ಯಕ್ಕಾಗಿ ಅನೇಕ ಯುದ್ಧಗಳನ್ನು ಮಾಡಿದರು. ಕ್ರಿ.ಶ. ೧೫೨೦ರಲ್ಲಿ ವಿಜಯನಗರದ ಪ್ರಸಿದ್ಧ ಅರಸನಾದ ಕೃಷ್ಣದೇವರಾಯನು ಇಸ್ಮಾಯಿಲ್ ಆದಿಲ್ ಶಾಹನನು ಸೋಲಿಸಿ[೧೫] ರಾಯಚೂರು ಕೋಟೆಯನ್ನು ವಶಪಡಿಸಿಕೊಂಡಿದ್ದನು.

ಕೃಷ್ಣದೇವರಾಯನ ಆಡಳಿತದ ನಂತರ ರಾಯಚೂರು ಪ್ರದೇಶವು ಮತ್ತೆ ಬಿಜಾಪುರ ಸುಲ್ತಾನರ ವಶಕ್ಕೆ ಬಂದಿತ್ತು. ಮುಂದೆ ಬಿಜಾಪುರ ಹಾಗೂ ಗೋಲ್‌ಕೊಂಡ ರಾಜ್ಯಗಳು ಮೊಘಲರ ವಶವಾಗಿದ್ದಾಗ ರಾಯಚೂರು ಸಹ ಅವರ ಅಧಿಕಾರಕ್ಕೆ ಸೇರಿತ್ತು. ಮೊಘಲರ ಸುಬೇದಾರನಾದ ಅಸಫ್‌ಶಾಹ ನಿಜಾಮ ಉಲ್‌ಮುಲ್ಕನು ೧೭೨೪ರಲ್ಲಿ ಹೈದ್ರಾಬಾದನಲ್ಲಿ ತನ್ನ ಸ್ವತಂತ್ರ ರಾಜ್ಯ ಸ್ಥಾಪಿಸಿದ್ದನು. ಈ ಅಸಫ್‌ಶಾಹಿ ಅರಸು ಮನೆತನದ ಅಧಿಕಾರವು ೧೯೪೮ರವರೆಗೆ ಮುಂದುವರೆದಿತ್ತು.

**ರಾಯಚೂರಿನ ಐತಿಹಾಸಿಕ ಸ್ಮಾರಕಗಳು.**

ಈ ಮಧ್ಯೆ ರಾಯಚೂರು ಪ್ರದೇಶವು ಕೆಲವು ಕಾಲ ಟಿಪ್ಪುಸುಲ್ತಾನನ ವಶವಾಗಿತ್ತು. ೧೭೯೯ರಲ್ಲಿ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಸೋತು ಮರಣ ಹೊಂದಿದನು. ಮೈಸೂರು ರಾಜ್ಯದ ಅನೇಕ ಭಾಗಗಳನ್ನು ಬ್ರಿಟಿಷ್‌ರು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು. ಅಸಫ್‌ಶಾಹಿ

೧೪. ಪ್ರೊ, ಷೇಕ್ ಅಲಿ (ಸಂ.) : ಕರ್ನಾಟಕ ಚರಿತ್ರೆ, ಸಂಪುಟ-೪, ಪು-೨೮೫

೧೫. ಫಾಲಾಕ್ಷಿ : ಕರ್ನಾಟಕ ಇತಿಹಾಸ, ಪು-೧೪೮

ಮನೆತನದ ಐದನೇ ನಿಜಾಮನಾದ ಅಫಜಲ ಉದೌಲನು ದಕ್ಷ ಅರಸನಾಗಿದ್ದನು. ಈ ನಿಜಾಮ ಹಾಗೂ ಇವನ ಪ್ರಧಾನ ಮಂತ್ರಿಯಾಗಿದ್ದ ಮೊದಲನೆ ಸಾಲಾರಜಂಗ ಇವರು ಬ್ರಿಟಿಷರ ಮಿತ್ರರಾಗಿದ್ದು ಅವರೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿದ್ದರು.

೧೮೫೭ರ ಸಿಪಾಯಿ ದಂಗೆಯ ಕಾಲದಲ್ಲಿ ಬ್ರಿಟಿಷರಿಗೆ ಸಹಾಯ ಸಲ್ಲಿಸಿದ್ದರು. ಅದಕ್ಕೆ ಪ್ರತಿಯಾಗಿ ಬ್ರಿಟಿಷರು ೧೮೫೮ರ ಒಪ್ಪಂದದ ಪ್ರಕಾರ ಉಸ್ಮಾನಾಬಾದ್ ಹಾಗೂ "ರಾಯಚೂರು ದೋ ಆಬ್ ಪ್ರದೇಶವನ್ನು ನಿಜಾಮರಿಗೆ ಬಿಟ್ಟು ಕೊಟ್ಟರು." ಹೀಗೆ ರಾಯಚೂರು ಪ್ರದೇಶವು ಹೈದರಾಬಾದ್ ನಿಜಾಮರ ಆಡಳಿತಕ್ಕೆ ಒಳಪಟ್ಟಿತು.

ರಾಯಚೂರು ಜಿಲ್ಲೆಯಲ್ಲಿ ಕೊಪ್ಪಳವು ಸಾತಂತ್ರ್ಯ ಸಂಗ್ರಾಮದ ಕೇಂದ್ರವಾಗಿತ್ತು.[೧೬] ೧೮೫೭ರ ಸಿಪಾಯಿ ದಂಗೆಯ ಮೊದಲೇ ಬ್ರಿಟಿಷರ ವಿರುದ್ದ ಸಾತಂತ್ರ್ಯ ಚಳುವಳಿಯ ಮೊದಲನೆಯ ಕಿಡಿಯು ಪ್ರಾರಂಭವಾದದ್ದು ಕೊಪ್ಪಳದಲ್ಲಿ. ೧೮೧೯ರಲ್ಲಿ ಕೊಪ್ಪಳದ ಪ್ರಸಿದ್ದ ಜಮೀನುದಾರನಾದ ವೀರಪ್ಪನು ಬ್ರಿಟಿಷರ ವಿರುದ್ದ ದಂಗೆ ಎದ್ದು ಆ ಕೋಟೆಯನ್ನು ವಶಮಾಡಿಕೊಂಡಿದ್ದನು. ಕೊಪ್ಪಳವನ್ನು ಪುನಃ ಪಡೆಯಲು ಬ್ರಿಡಿಷರು ಮರಾಟವಾಡಾ ಹಾಗೂ ಸಿಕಂದರಾಬಾದಿನಿಂದ ದೊಡ್ಡ ಸೈನ್ಯವನ್ನೇ ತರಬೇಕಾಗಿತ್ತು. ಬಹಳ ಕಷ್ಟದಿಂದ ವೀರಪ್ಪನನ್ನು ಸೋಲಿಸಿದ್ದರು. ಬ್ರಿಟಿಷರ ಸೈನ್ಯದಲ್ಲಿ ೯ ಜನ ಮರಣ ಹೊಂದಿದ್ದರು. ಹಾಗೂ ೫೧ ಜನರು ಗಾಯಗೊಂಡಿದ್ದರು.

ಸಿಪಾಯಿ ದಂಗೆಯ ಪ್ರಬಾವದಿಂದ ೧೮೫೮ರ ಮೇ ತಿಂಗಳು ಮುಂಡರಗಿ ಭೀಮರಾಯ ಹಾಗೂ ಹಮ್ಮಿಗಿ ಕೆಂಚನಗೌಡ ದೇಸಾಯಿ ಬ್ರಿಟಿಷರಿಂದ ಕೊಪ್ಪಳ ಕೋಟೆಯನ್ನು ವಶಪಡಿಸಿಕೊಂಡರು. ಸ್ವಾತಂತ್ರ್ಯ ವೀರರಾದ ಕೊಪ್ಪಳದ ಜನರು ಭೀಮರಾಯನನ್ನು ಸ್ವಾಗತಿಸಿ ಅವನ ಸೈನ್ಯ ಸೇರಿದ್ದರು. ಕೊಪ್ಪಳವನ್ನು ಪುನಃ ಪಡೆದುಕೊಳ್ಳಲು ಬ್ರಿಟಷರು ಧಾರವಾಡ, ಬಳ್ಳಾರಿ ಹಾಗೂ ರಾಯಚೂರು ಜಿಲ್ಲೆಯಿಂದ ಸೈನ್ಯವನ್ನು ಕಳಿಸಿದ್ದರು. ಕೊಪ್ಪಳದ ಭದ್ರ ಹಾಗೂ ಬಲಿಷ್ಠ ಕೋಟೆಯನ್ನು ಒಡೆಯುವುದು ಅಸಾಧ್ಯವಾಗಿತ್ತು. ಭೀಮರಾಯನ ತಲೆಯನ್ನು ತಂದವರಿಗೆ ೫.೦೦೦ ರೂಪಾಯಿ ಕಾಣಿಕೆಯನ್ನು ಕೊಡುವುದಾಗಿ ಬ್ರಿಟಿಷ ಸರಕಾರವು ಸಾರಿತ್ತು. ಕೆಳಕೋಟೆಯ ಬಾಗಿಲಿನ ಕಾವಲುಗಾರರು ಬ್ರಿಟಿಷರೊಂದಿಗೆ ಒಳ ಸಂಚು ಮಾಡಿ ಬಾಗಿಲನ್ನು ತೆರೆದಿದ್ದರಿಂದ ಕೋಟೆಯನ್ನು ವಶಪಡಿಸಿಕೊಳ್ಳುವುದು ಸಾಧ್ಯವಾಯಿತು. ಸ್ವಾಭಿಮಾನಿಯಾದ ಹಮ್ಮಿಗಿ ಕೆಂಚನಗೌಡ ದೇಸಾಯಿ ಭೀಮರಾಯರು ವೈರಿಗಳ ಕೈಗೆ ಸಿಗದೆ ತಮ್ಮಷ್ಟಕ್ಕೆ ಗುಂಡು ಹಾಕಿಕೊಂಡು ವೀರಮರಣವನ್ನಪ್ಪಿದರು.

---

೧೬. ಬಿ. ಸಿ. ಪಾಟೀಲ : ಕೊಪ್ಪಳ : ಸಾಂಸ್ಕೃತಿಕ ಪರಂಪರೆ, ಪು-೬೧

ರಾಯಚೂರು ಕರ್ನಾಟಕ ರಾಜ್ಯದ ಪ್ರಸಿದ್ದ ಜಿಲ್ಲೆಗಳ ಪುನರ್ ವಿಂಗಡಣೆಯಾಗಿ ರಾಯಚೂರು ಜಿಲ್ಲೆಯನ್ನು ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಾಗಿ ವಿಂಗಡಿಸಲಾಗಿದೆ. ಸದ್ಯ ರಾಯಚೂರು ಜಿಲ್ಲೆಯು ರಾಯಚೂರು, ಮಾನ್ವಿ, ಸಿಂಧನೂರು, ಲಿಂಗಸೂರು, ದೇವದುರ್ಗ ಎಂಬ ತಾಲೂಕುಗಳನ್ನು ಒಳಗೊಂಡಿದೆ.

**ರಾಯಚೂರಿನ ಸಾಂಸ್ಕೃತಿಕ ಪರಿಸರ**

ಜನಪದ ಕಲೆಗಳ ವಿವರಗಳೆಂದರೆ ಜನಪದ ಜೀವನ ಸಂಸ್ಕೃತಿಗಳ ವಿವರಗಳೇ ಆಗಿವೆ. "ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಮತ ಮತಿಗಳೆಂದು" ಕವಿರಾಜ ಮಾರ್ಗಕಾರ ಕರೆದಿರುವಂತೆ ಜನಪದ ಸಾಹಿತ್ಯವನ್ನು ಉಳಿಸಿಕೊಟ್ಟ ದುಡಿಯುವ ವರ್ಗವು ಅಕ್ಷರಾಭ್ಯಸವಿಲ್ಲದೆ ಅನುಭವದ ಮೂಲಕ ನಿತ್ಯ ಜೀವನದಲ್ಲಿ ಕಂಡುಂಡ ವಸ್ತುಗಳನ್ನೆ ಕಾವ್ಯವೆನಿಸಿದ ಜನಪದ ಸಾಹಿತ್ಯವು ಬಾಯಿಂದ ಬಾಯಿಗೆ ಹರಿದು ಬಂದು ನಮ್ಮ ಸಂಸ್ಕೃತಿಯನ್ನು ಬೆಳೆಸುವ ವಾಹಕಗಳಾಗಿದ್ದಾರೆ.[೧೭]

ರಾಯಚೂರು ಜಿಲ್ಲೆಯು ಶ್ರೀಮಂತವಾದ ಲಲಿತಕಲೆಗಳ ಪರಂಪರೆಯನ್ನು ಹೊಂದಿದ ನಾಡಾಗಿದೆ. ಇಲ್ಲಿಯ ಬಯಲಾಟ, ದೊಡ್ಡಾಟ, ಸಣ್ಣಾಟಗಳು, ಅವುಗಳ ವೇಷಭೂಷಣಗಳು ಇವತ್ತಿಗೂ ಉಳಿದುಕೊಂಡು ಬಂದಿರುವುದು ಈ ಜನರ ಆಸಕ್ತಿಗೆ ಸಾಕ್ಷಿಯಾಗಿದೆ. ಸೂತ್ರದಗೊಂಬೆಯಾಟ, ತೊಗಲುಗೊಂಬೆಯಾಟ, ಅವುಗಳನ್ನಾಡಿಸುವ ವಿಧಿ–ವಿಧಾನಗಳು ಕುತೂಹಲಕಾರಿಯಾಗಿದೆ. ತೊಗಲುಗೊಂಎಬಯಾಟ ಜನಪದ ಚಿತ್ರಕಲೆಯ ಒಂದು ದೊಡ್ಡ ಭಂಡಾರವೇ ಆಗಿದೆ. ಇದಲ್ಲದೇ ಲಂಬಾಣಿ ನೃತ್ಯ, ಕೋಲಾಟ, ನಂದಿಕೋಲು ಕುಣಿತ, ಹೆಜ್ಜೆ ಕುಣಿತ, ಹುಲಿವೇಷಗಳು, ಗೊರವರ ಕುಣಿತ, ಚೌಡಮ್ಮನ ಕುಣಿತ, ದುರುಗಮುರಗಿ ಕುಣಿತ, ಮುಂತಾದ ಜನಪದ ನೃತ್ಯ ಚಿತ್ರಕಲಾ ಪರಂಪರೆಯನ್ನು ಈ ಪ್ರದೇಶ ಇನ್ನೂ ಕಾಯ್ದುಕೊಂಡು ಬಂದಿದೆ. ಹಾಗೆಯೇ ಶಿಷ್ಟಪದ ಸಾಂಸ್ಕೃತಿಕ ಕಲಾಪರಂಪರೆಯೂ ಬಹುದೊಡ್ಡ ಪ್ರಮಾಣದಲ್ಲಿ ಬೆಳವಣಿಗೆಯಾಗಿದೆ. ಕಲಾವಿದ ಶಂಕರಗೌಡ ಬೆಟ್ಟದೂರ ಅವರು ಆ ಕಾಲದಲ್ಲಿಯೇ ಕಲ್ಕತ್ತದ ಶಾಂತಿನಿಕೇತನದಲ್ಲಿ ಶಾಸ್ತ್ರೀಯ ಚಿತ್ರಕಲಾ ಅಧ್ಯಯನವನ್ನು ಮಾಡಿ ಮುಂದೆ ದೆಹಲಿಯ ಬಿರ್ಲಾ ಭವನದಲ್ಲಿ ಗಾಂಧೀಜಿಯವರ ಸಮಗ್ರ ಜೀವನಚಿತ್ರಣವನ್ನು ಮತ್ತು ಚೀನಾ ತುನಹಾಂಗ್ ಗವಿಗಳಲ್ಲಿ ಐದು ಹಾಗೂ ಆರನೇ ಶತಮಾನದ ಭಿತ್ತಿಚಿತ್ರಗಳನ್ನು ಪ್ರತಿಮಾಡಿ ಕೊಡಲು ಭಾರತದಿಂದ ಆಯ್ಕೆಯಾಗಿ ಹೋದ ಕಲಾವಿದರಾಗಿದ್ದಾರೆ. ಈ ಕಾರ್ಯವನ್ನು ಮೂರು ತಿಂಗಳಲ್ಲಿ ಪೂರೈಸಿ ವಿಶ್ವದ ಗಮನವನ್ನು ಸೆಳೆದಿದ್ದಾರೆ. ರಾಯಚೂರಿನ ಮತ್ತೊಬ್ಬ ಹಿರಿಯ ಕಲಾವಿದ ಹಿರಾಲಾಲ್ ಮಲ್ಕಾರಿ

೧೭. ಡಾ. ಮೃತ್ಯುಂಜಯ ಹೊರಕೇರಿ & ಡಾ. ಬಸವಲಿಂಗ ಸೊಪ್ಪಿಮಠ (ಸಂ.) : ರಾಯಚೂರು ಜಿಲ್ಲಾ ದರ್ಶನ, ಪು-೫೮

ಅವರು ಸಾಂಪ್ರದಾಯಿಕ ಚಿತ್ರಗಳನ್ನು ಬರೆಯುತ್ತ ಹೊರದೇಶಗಳಲ್ಲಿಯೂ ಬೇಡಿಕೆಯನ್ನು ಗಳಿಸಿಕೊಂಡ ಕಲಾವಿದರು. ಇವತ್ತಿಗೂ ಅನೇಕ ದೇವಾಲಯಗಳಲ್ಲಿ ಇವರು ಬಿಡಿಸಿರುವ ಭಿತ್ತಿಚಿತ್ರಗಳು ಅವರ ಕಲಾಸಾಧನೆಯನ್ನು, ಕಲಾಪರಿಣಿತಿಯನ್ನು ಪ್ರತಿಬಿಂಬಿಸುತ್ತದೆ.

ಸಂಗೀತ ಕ್ಷೇತ್ರದಲ್ಲಿ ಅಂತರರಾಷ್ಟ್ರೀಯ ಖ್ಯಾತಿಯನ್ನು ಗಳಿಸಿರುವ ಪಂಡಿತ ನರಸಿಂಹಲು ವಡವಾಟಿ ಕ್ಲಾರಿಯೋನೇಟ್‌ದಲ್ಲಿ ದೇಶ-ವಿದೇಶದಲ್ಲಿ ಹೆಸರಾಗಿದ್ದಾರೆ. ಶಾಸ್ತ್ರೀಯ ಸಂಗೀತದ ಮೇರುಪರ್ವತವೆಂದೇ ಪ್ರಖ್ಯಾತಿ ಪಡೆದ ಪಂಡಿತ ಸಿದ್ಧರಾಮ ಜಂಬಲದಿನ್ನಿ ಅವರು ರಾಷ್ಟ್ರಮಟ್ಟದಲ್ಲಿ ರಾಯಚೂರಿನ ಹೆಸರನ್ನು ಬೆಳಗಿಸಿದ ಮಹಾನ್‌ಭಾವರಾಗಿದ್ದಾರೆ.ಹಾರ್ಮೋನಿಯಂ ವಾದ್ಯಗಾರ ಯರಗೇರಾದ ಈಶ್ವರಪ್ಪ, ರಂಗಭೂಮಿ ಹಿನ್ನೆಲೆಯ ಕಲ್ಮಲಾ ನಾರಣಪ್ಪ ಹೀಗೆ ಕಲಾವಿದರ ಸಂಖ್ಯೆ ಹೆಚ್ಚುತ್ತಲೇ ಹೋಗುತ್ತದೆ. ರಾಯಚೂರು ಜಿಲ್ಲೆಯಾದ್ಯಂತ ಸುಗಮ ಸಂಗೀತ ಹಾಗೂ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಜೀವಂತವಾಗಿರಿಸುವಲ್ಲಿ ಪಂಡಿತ ಪಂಚಾಕ್ಷರಿ ಗವಾಯಿಗಳ ಟ್ರಸ್ಟ್ ಹಾಗೂ ಪಂಡಿತ ಸಿದ್ಧರಾಮ ಜಂಬಲದಿನ್ನಿ ಸ್ಮಾರಕ ಟ್ರಸ್ಟ್‌ಗಳು ಅನೇಕ ಕಾರ್ಯಕ್ರಮಗಳ ಮೂಲಕ ರಾಷ್ಟ್ರೀಯ, ಅಂತರರಾಷ್ಟ್ರೀಯ ಕಲಾಸಕ್ತರನ್ನು ಪ್ರಸನ್ನಗೊಳಿಸಿದ್ದಾರೆ.

ಸಾಹಿತ್ಯ ಕ್ಷೇತ್ರದಲ್ಲಿ ಶಾಂತರಸರದು ದೊಡ್ಡ ಹೆಸರು. ಸಾಹಿತಿಗಳ ದೊಡ್ಡ ಪರಂಪರೆ ಈ ಜಿಲ್ಲೆಗಿದೆ. ಹೀಗೆ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರಕಲೆ ಎಲ್ಲ ಲಲಿತಕಲೆಗಳಲ್ಲಿಯೂ ತನ್ನದೇ ಆದ ಪರಂಪರೆಯನ್ನು ಉಳಿಸಿಕೊಂಡು ಬಂದ ಹಿರಿಮೆ ಈ ಜಿಲ್ಲೆಗಿದೆ. ಈ ಪರಂಪರೆ ಪ್ರಾಚೀನ ಕಾಲದಿಂದಲೂ ಉಳಿದುಕೊಂಡು ಬಂದಿರುವುದಕ್ಕೆ ನಮಗೆ ಪ್ರಾಗೈತಿಹಾಸಿಕ ಕಾಲದ ಮಾನವರ ನೃತ್ಯ ಭಂಗಿಯ ವಿವಿಧ ರೀತಿಯ ಚಿತ್ರ-ಚಿತ್ತಾರಗಳು ರಾಯಚೂರು ಜಿಲ್ಲೆಯಾದ್ಯಂತ ಕಂಡುಬರುತ್ತದೆ. ಹಾಗೆಯೇ ಅನೇಕ ರಾಜರುಗಳ ಆಸಕ್ತಿಯ ಕಾರಣವಾಗಿ ಸುಂದರ ವಿನ್ಯಾಸದ ವಾಸ್ತುಶಿಲ್ಪ, ಕೋಟೆ-ಕೊತ್ತಲುಗಳು, ದೇವಾಲಯದಲ್ಲಿರುವ ವಿವಿಧ ಶೈಲಿಯಲ್ಲಿರುವ ಶಿಲ್ಪಕಲಾಕೃತಿಗಳು ಮತ್ತು ೧೮ನೇ ಶತಮಾನದಲ್ಲಿ ರಚನೆಗೊಂಡು ಅದ್ಭುತ ವಾಸ್ತುವಿನ್ಯಾಸದ ಖಾಜಿನ ಗೌಡರ ಮನೆ ಭಿತ್ತಿಚಿತ್ರಗಳು ಇವತ್ತಿಗೂ ಗಮನ ಸೆಳೆಯುತ್ತವೆ. ಈ ಪರಂಪರೆಯ ಹಿನ್ನೆಲೆಯಲ್ಲಿ ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆಯನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಲು ಪ್ರಸ್ತುತ ವಿಷಯವನ್ನು ಆಯ್ಕೆಮಾಡಿಕೊಳ್ಳಲಾಗಿದೆ.

❑❑❑

ಅಧ್ಯಾಯ – ಮೂರು

# ಭಿತ್ತಿಚಿತ್ರಕಲೆಯ ಅರ್ಥ, ಸ್ವರೂಪ ಮತ್ತು ಪರಂಪರೆ

ಚಿತ್ರಕಲೆಯು ಹತ್ತು ಹಲವು ಮಾಧ್ಯಮಗಳಲ್ಲಿ ವೈವಿಧ್ಯಮಯವಾಗಿ ಬೆಳವಣಿಗೆಯನ್ನು ಹೊಂದಿದೆ. ಹಸ್ತಪ್ರತಿ ಚಿತ್ರಕಲೆ, ಕ್ಯಾನ್ವಾಸ್ ಮೇಲಿನ ಚಿತ್ರಕಲೆ, ಕಾಗದ ಮೇಲಿನ ಚಿತ್ರಕಲೆ, ತಾಡೋಲೆ ಮೇಲಿನ ಚಿತ್ರಕಲೆ, ಭೂರ್ಜ್ವ ಪತ್ರದ ಮೇಲಿನ ಚಿತ್ರಕಲೆ, ಕಟ್ಟಿಗೆ, ಲೋಹ ಪಲಕಗಳ ಮೇಲಿನ ಚಿತ್ರಕಲೆ, ಗಾಜಿನ ಮೇಲಿನ ಚಿತ್ರಕಲೆ, ಗಂಜೀಫಾ ಚಿತ್ರಕಲೆ ಹೀಗೆ ಹತ್ತಾರು ಹೆಸರುಗಳಿಂದ ಅವುಗಳ ಬೆಳವಣಿಗೆಯ ಸ್ವರೂಪದ ಮೇಲೆ ಈ ಕಲೆಯನ್ನು ಅರ್ಥೈಸಲಾಗುತ್ತದೆ. ಹಾಗೆಯೇ ಗೋಡೆಯ ಮೇಲೆ ರಚನೆಯಾದ ಚಿತ್ರಕಲೆಯನ್ನು ಸಾಮಾನ್ಯವಾಗಿ ಚಿತ್ರಕಲೆಯೆಂದು ಕರೆಯುಬಹುದು. ಈ ಕಲೆ ವಿಶ್ವದಾದ್ಯಂತವಿದ್ದು, ಈ ಭಿತ್ತಿಚಿತ್ರಕಲೆಯನ್ನು ಹಲವಾರು ಜನ ವಿದ್ವಾಂಸರು ವಿವಿಧ ರೀತಿಯಲ್ಲಿ ಅರ್ಥೈಸಿರುವುದನ್ನು ಇಲ್ಲಿ ಕಾಣಬಹುದಾಗಿದೆ.

## ಭಿತ್ತಿಚಿತ್ರಕಲೆಯ ಮಾಹಿತಿಯನ್ನು ನೀಡುವ ಪ್ರಾಚೀನ ಗ್ರಂಥಗಳು

ಕ್ರಿ.ಪೂ. ೨ನೇ ಶತಮಾನದ ಕುಲ್ಲವಗ್ಗ, ಕ್ರಿ.ಶ. ೬ನೇ ಶತಮಾನದ ಬೃಹತಸಂಹಿತೆ, ಕ್ರಿ.ಶ. ೫ನೇ ಶತಮಾನದ ಅಭಿಲಾಷಿತಾರ್ಥ ಚಿಂತಾಮಣಿ, ಕ್ರಿ.ಶ. ೧೧ನೇ ಶತಮಾನದ ಶಿಲ್ಪರತ್ನ ಗ್ರಂಥಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಇವುಗಳ ಜೊತೆಗೆ ವಾತ್ಸಾಯನನು ಬರೆದ ಕಾಮಸೂತ್ರ, ದಾಮೋದರ ಗುಪ್ತನ ಚಿತ್ರಸೂತ್ರ, ಅಲ್ಲದೆ ಮೃಚ್ಛಕಟಕ, ಧರ್ಮಪಾಲನ ತಿಲಕಮಣಿ, ನಾರದ ಶಿಲ್ಪ ಮುಂತಾದ ಪ್ರಾಚೀನ ಗ್ರಂಥಗಳು[೧] ಭಿತ್ತಿಚಿತ್ರಕಲೆಗೆ ಪೂರ್ವ ಇತಿಹಾಸವನ್ನು ತಿಳಿಸುವ ಕೃತಿಗಳಾಗಿವೆ.

೦೧. ಡಾ. ಎಸ್. ಸಿ. ಪಾಟೀಲ (ಸಂ.) : ಚಿತ್ರಾಕ್ಷಿ, ಪು–೩೩

## ಅರ್ಥ ಮತ್ತು ಸ್ವರೂಪ

ಭಿತ್ತಿಚಿತ್ರವನ್ನು ಆಂಗ್ಲ ಭಾಷೆಯಲ್ಲಿ "Mural painting" ಎಂದು ಕರೆಯಲಾಗಿದೆ. ಈ "Mural" ಶಬ್ದವು ಲ್ಯಾಟಿನ್ ಭಾಷೆಯ 'Murus'ದಿಂದ ಬಂದಿದೆ. 'Murus'ದ ಅರ್ಥವು ಗೋಡೆ (wall) ಎಂದಾಗುವುದು.[೨] ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಕೆತ್ತಿ, ಕೊರೆದು ಅಂಟಿಸಿ ಹೀಗೆ ಇತರ ಯಾವುದೇ ವಿಧಾನದಿಂದ ಗೋಡೆಯ ಮೇಲೆ ರೂಪಿಸಿದ ಚಿತ್ರಗಳು " Mural" ವ್ಯಾಪ್ತಿಯಲ್ಲಿ ಬರುತ್ತವೆ ಎಂದು ಕೇಂಬ್ರಿಡ್ಜ್ ವಿಶ್ವಕೋಶ ತಿಳಿಸುತ್ತದೆ.[೩] ಗೋಡೆ ಮೇಲ್ಛಾವಣಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು ಆಕ್ಸ್‌ಫೋರ್ಡ್ ಶಬ್ದಕೋಶದಲ್ಲಿ ಹೇಳಲಾಗಿದೆ.[೪] ಗೋಡೆಗಳು, ಮೇಲ್ಛಾವಣಿಗಳು ಮತ್ತು ಗುಹೆಗಳನ್ನು ಫ್ರೆಸ್ಕೊ, ಸೆಕ್ಕೊ, ತೈಲವರ್ಣ, ಟೆಂಪರಾ ಇಲ್ಲವೆ ಎನ್‌ಕ್ಯಾಸ್ಟಿಕ್ ವಿಧಾನಗಳಿಂದ ಚಿತ್ರರಚಿಸಿ ಅಲಂಕರಿಸುವ ವಿಧಾನವನ್ನು ಸಹ ಭಿತ್ತಿಚಿತ್ರಕಲೆ() ಎಂದು ವೆಬ್‌ಸ್ಟರ್ಸ್ ನ್ಯೂ ವರ್ಲ್ಡ್ ಸೈಕ್ಲೋಪೀಡಿಯಾ ಪರಿಗಣಿಸಿದೆ.[೫]

ಅದಿಷ್ಠಾನದ ಮೇಲೆ ಪ್ರಸ್ತರದ ಕೆಳಗೆ ಇರುವ ಒಟ್ಟು ಭಾಗಕ್ಕೆ 'ಭಿತ್ತಿ', 'ಕುಡ್ಯ' ಅಥವಾ 'ಸ್ತಂಭವರ್ಗ' ಎಂದು ಕರೆಯುತ್ತಾರೆ.[೬]

ಗೋಡೆಯ ಮೇಲೆ ಸುಣ್ಣವನ್ನು ಲೇಪಿಸಿ ಸುಣ್ಣವು ಇನ್ನೂ ಹಸಿಯಾಗಿರುವಾಗಲೇ ಚಿತ್ರವು ಪೂರ್ಣವಾಗಿ ಚಿತ್ರಿತವಾಗುವಂತೆ ಚಿತ್ರಿಸುವುದು ಫ್ರೆಸ್ಕೋ ಪದ್ಧತಿಯ ವೈಶಿಷ್ಟ್ಯವಾಗಿದೆ. ಸುಣ್ಣವು ಒಣಗಿದ ನಂತರ ಅದರೊಂದಿಗೆ ಚಿತ್ರವೂ ಗಟ್ಟಿಗೊಂಡು ಶಾಶ್ವತವಾಘಿ ಉಳಿಯುತ್ತದೆ. ಪುನರುತ್ಥಾನ ಕಾಲದಲ್ಲಿ ಗೋಡೆಗಳ ಮೇಲೆ ಚಿತ್ರಿಸಲ್ಪಟ್ಟ ಅನೇಕ ಫ್ರೆಸ್ಕೋ ಚಿತ್ರಗಳು ಉತ್ಕೃಷ್ಟ ಕಲಾಕೃತಿಗಳಾಗಿವೆ. ಗೋಡೆಗಳಿಗೆ ಬಣ್ಣವನ್ನು ಹಚ್ಚುವ ವಿಧಾನಗಳೂ ಅನೇಕ ವಿಧಗಳಾಗಿವೆ. ತೈಲವರ್ಣ ಮತ್ತು ಮೇಣ ವರ್ಣಗಳನ್ನೂ ಸಹ ಬಳಸಬಹುದೆಂಬುದಕ್ಕೆ ವೆನಿಸ್ ಮತ್ತಿತರ ಕಡೆಗಳಲ್ಲಿ ಕ್ಯಾನವಾಸಿನ ಮೇಲೆ ಚಿತ್ರಿಸಿ ನಂತರ ಗೋಡೆ ಇಲ್ಲವೆ ಒಳಮಾಳಿಗೆಯಲ್ಲಿ ಅಂಟಿಸಿರುವುದು ಕಂಡುಬರುತ್ತದೆ. ಸುಣ್ಣವು ಹಸಿಯಾಗಿರುವಾಗಲೇ ಚಿತ್ರಣಕಾರ್ಯವು ಮುಗಿಯಲೇ ಬೇಕಾಗಿರುವುದರಿಂದ ಈ ಪದ್ಧತಿಯು ಸಹ ಬಹು ಕಠಿಣವಾಗಿದೆ. ಚಿತ್ರಣ ಕಾರ್ಯವು ಸಾಧ್ಯವಾಗುವ ಮಟ್ಟಿಗೆ ಗೋಡೆಯ ಭಾಗದ ಮೇಲೆ ಸುಣ್ಣವನ್ನು ಲೇಪಿಸಿ ಅದರ ಮೇಲೆ ವರ್ಣಚಿತ್ರಗಳನ್ನು ರಚಿಸಬೇಕಾಗುತ್ತದೆಯಲ್ಲದೆ ಸುಣ್ಣದ

---

೦೨. ಜಯಂತ್ ಚಕ್ರವರ್ತಿ : ಟೆಕ್ನಿಕ್ಸ್ ಇನ್ ಇಂಡಿಯನ್ ಮ್ಯೂರಲ್ ಪೇಂಟಿಂಗ್ಸ್, ಪು-೧೨

೦೩. ಡೇವಿಡ್ ಕ್ರಿಸ್ಟಲ್ : ದಿ ಕ್ಯಾಂಬ್ರಿಡ್ಜ್ ಎನ್‌ಸೈಕ್ಲೋಪಿಡಿಯಾ, ಪು-೮೨೨

೦೪. ದಿ ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನರಿ : ಸಂಪುಟ-೧೦, ಪು-೧೦೬

೦೫. ವೆಬ್‌ಸ್ಟರ್ಸ್ ನ್ಯೂ ವರ್ಲ್ಡ್ ಎನ್‌ಸೈಕ್ಲೋಪಿಡಿಯಾ, ಪು-೭೭೨

೦೬. ಪಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೨೪೩

ಲೇಪವು ಹಸಿಯಾಗಿರಬೇಕಾದುದು ಅಗತ್ಯವಾಗಿದೆ. ಒಂದು ಬಾರಿ ಬಣ್ಣವನ್ನು ಬಳಿದ ನಂತರ ತಿದ್ದುಪಡಿ ಮಾಡಲು ಸಾಧ್ಯವಾಗಲಾರದು.[೭]

ಇಲ್ಲಿ ಭಿತ್ತಿಚಿತ್ರಕಲೆಯನ್ನು ನಾವು ಗುಹಾಲಯಗಳ ಮತ್ತು ಕಲ್ಲಾಸರೆಯ ಗೋಡೆಯ ಮೇಲ್ಪದಿಯ ಮೇಲೆ ಬಿಡಿಸಿದ ಚಿತ್ತಾರಗಳನ್ನು ಮತ್ತು ನಾಗರಿಕ ಮಾನವ ಗೋಡೆಯನ್ನು ಸಂಸ್ಕರಿಸಿ ಅದರ ಮೇಲೆ ಬಿಡಿಸುವ ವರ್ಣಚಿತ್ರಗಳನ್ನು ಭಿತ್ತಿಚಿತ್ರಕಲೆಯೆಂದು ವಿಶಾಲವಾದ ಅರ್ಥದಲ್ಲಿ ಪರಿಭಾವಿಸಿಕೊಂಡು ಪ್ರಸ್ತುತ ಅಧ್ಯಯನವನ್ನು ರೂಪಿಸಲಾಗಿದೆ.

ಗೋಡೆ ಮತ್ತು ಮೇಲ್ಹಾವಣಿಗಳ ಮೇಲೆ ವರ್ಣದಿಂದ ರಚಿಸಿದ ಚಿತ್ರಗಳು ಮತ್ತು ಬಣ್ಣದ ಕಲ್ಲಿನ ತುಂಡುಗಳನ್ನು (ಸೂಡುಬಿಲ್ಲೆ) ಅಂಟಿಸಿ ರೂಪಿಸಿದ ಮೊಸಾಯಿಕ್ ಚಿತ್ರಗಳು (Mural painting) ಭಿತ್ತಿಚಿತ್ರಗಳ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತವೆ ಎಂದು ಬ್ರಿಟಾನಿಕಾ ಎನ್‌ಸೈಕ್ಲೋಪಿಡಿಯಾ ಹೇಳುತ್ತದೆ.[೮] ಕನ್ನಡ ಜಾನಪದ ವಿಶ್ವಕೋಶವು ಭಿತ್ತಿಚಿತ್ರ ಎಂದರೆ ಗೋಡೆಯ ಮೇಲೆ ಬರೆದಿರುವ ಚಿತ್ರವೆಂದು ಹೇಳಿ, ಭಿತ್ತಿ ಎಂಬುದಕ್ಕೆ ಗೋಡೆ, ಕುಡ್ಯ, ಮೂಲ, ತಳ, ಹಿನ್ನೆಲೆ, ಚಿತ್ರವನ್ನು ಬರೆಯುವ ಮೂಲಾಧಾರಗಳಾದ ಬಟ್ಟೆ, ಗೋಡೆ, ಮೊದಲಾದ ಸಾಧನಗಳು ಎಂಬ ಅರ್ಥಗಳನ್ನು ಕೊಟ್ಟಿದೆ.[೯] ಭಾರತೀಯ ಪ್ರಾಚೀನ ಶಿಲ್ಪಶಾಸ್ತ್ರಗಳು ಚಿತ್ರಬರೆಯಲಾಗುವ ಮೂಲಾಧಾರವಾದ ಗೋಡೆ ಮತ್ತು ಚಿತ್ರಣಕ್ಕಾಗಿ ಆಧಾರದ ಮೇಲೆ ಲೇಪಿಸಲಾಗುವ ಗಾರೆ ಲೇಪನ ಎರಡಕ್ಕೂ ಭಿತ್ತಿ ಎಂದೇ ಕರೆದಿವೆ.[೧೦] ಗೋಡೆ ಮೇಲೆ ಲೇಪಿಸಲಾಗುವ ಗಾರೆ ಲೇಪನವನ್ನು ಭಿತ್ತಿ ಎಂದು ಪರಿಗಣಿಸಿದಾಗ ಗಾರೆ ಲೇಪನದ ಮೇಲೆ ರಚನೆಗೊಂಡ ಚಿತ್ರಗಳನ್ನು 'ಭಿತ್ತಿಚಿತ್ರ' ಎಂದು ಹೇಳಬಹುದಾಗಿದೆ. ಹೀಗೆ ಅನಾದಿ ಕಾಲದಿಂದಲೂ ಭವ್ಯ ಇತಿಹಾಸವನ್ನು ಹೊಂದಿರುವ ಈ ಭಿತ್ತಿಚಿತ್ರಕಲೆ ನಮ್ಮ ಭಾರತೀಯ ಚಿತ್ರಕಲಾ ಕಲಾಪರಂಪರೆಯಲ್ಲಿ ತನ್ನದೇಯಾದ ಸ್ಥಾನವನ್ನು ಇಂದಿಗೂ ಉಳಿಸಿಕೊಂಡು ಬಂದಿದೆ.

ಮಾತಿಗೆ ಮೊದಲು ಸಂಜ್ಞೆ, ಭಾಷೆಗ ಮೊದಲು ಚಿತ್ರಕಲೆ, ಮಾನವನ ಸಂಪರ್ಕ ಸಾಧನವಾಗಿತ್ತು. ಆ ದೃಷ್ಟಿಯಿಂದ ಪ್ರಾಗೈತಿಹಾಸಿಕ ಕಾಲದ ಕಲ್ಲಾಸರೆಯ ವರ್ಣಚಿತ್ರಗಳು ಮತ್ತು ಬಯಲು ಬಂಡೆಯ ಕೊರೆದ ಚಿತ್ರಗಳು ಮಾನವನ ತೀರ ಹಳೆಯ ಬರವಣಿಗೆಯ ದಾಖಲೆಗಳಾಗಿವೆ. "ಈ ದಾಖಲೆಗಳು ನಮಗೆ ಅವರ ವಿಚಾರಗಳು, ನಂಬಿಕೆಗಳು ಮತ್ತು ಸೌಂದರ್ಯೋಪಾಸನೆಯ ಬೆಳವಣಿಗೆಯಂತಹ ಆಂತರಿಕ ವಿಷಯಗಳನ್ನು

೦೭. ಪಿ. ಆರ್. ತಿಪ್ಪೇಸ್ವಾಮಿ (ಪ್ರಸಂ.) : ಕಲಾಕೋಶ, ಪು-೨೪೪

೦೮. ದಿ. ನ್ಯೂ ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ : ಭಾಗ-೮, ಪು-೪೨೫

೦೯. ಡಾ. ಚಂದ್ರಶೇಖರ ಕಂಬಾರ (ಸಂ.) : ಜನಪದ ವಿಶ್ವಕೋಶ, ಭಾಗ-೨, ಪು-೨೫೨

೧೦. ಜಯಂತ್ ಚಕ್ರವರ್ತಿ : ಟೆಕ್ನಿಕ್ ಇನ್ ಇಂಡಿಯನ್ ಮ್ಯೂರಲ್ ಪೇಂಟಿಂಗ್, ಪು-೨೦

ತಿಳಿಸಿಕೊಡುತ್ತವೆ. ಅಲ್ಲದೇ ಆ ಕಾಲದ ಸಾಮಾಜಿಕ, ಧಾರ್ಮಿಕ ಜೀವನದ ಬಗ್ಗೆ ಹಾಗೂ ಸಮಕಾಲೀನ ಪ್ರಾಣಿವರ್ಗ ಸಸ್ಯವರ್ಗಗಳ ಕುರಿತು ತಿಳಿಸಿಕೊಡುವ ಮಹತ್ವದ ಚಿತ್ರಲಿಪಿಗಳಾಗಿವೆ"[೧೦] ಎಂಬ ವಿಚಾರಗಳು ಹಾಗೆಯೇ ಜೀವ ಸಂತತಿಯ ಐತಿಹಾಸಿಕ ಅಧ್ಯಯನ" ಗಳಂತಹ ಸಂದರ್ಭದಲ್ಲಿ ಅಸ್ತಿಪಂಜರದಂತಹ ಅವಶೇಷಗಳು ಸಿಗದೇ ಹೋದಾಗ ಚಿತ್ರಗಳು ಮತ್ತು ಇವರ ಕಲಾಕೃತಿಗಳು ಕೆಲವು ಮಟ್ಟಿಗೆ ಆ ಕಾಲದ ಜೀವಿಗಳ ಇರುವಿಕೆಯ ಬಗ್ಗೆ ಮಹತ್ವದ ದಾಖಲೆಗಳಾಗುತ್ತವೆ[೧೧] ಎಂಬುದನ್ನು ಇಲ್ಲಿ ಕಂಡುಕೊಳ್ಳಬಹುದು. ನಾಗರಿಕತೆ ಬೆಳೆದಂತೆ ಭಿತ್ತಿಚಿತ್ರಕಲಾ ಪರಂಪರೆಯೂ ಜೊತೆಜೊತೆಗೆ ಬೆಳೆದು ಬಂದಿದೆ. ಈ ದಿಸೆಯಲ್ಲಿ ಭಿತ್ತಿಚಿತ್ರ ಪರಂಪರೆಯನ್ನು ಗುರುತಿಸುವುದರೊಂದಿಗೆ ಒಂದು ರೀತಿಯಲ್ಲಿ ಮಾನವನ ನಾಗರಿಕತೆಯ ಹೆಜ್ಜೆಯನ್ನು ಗುರುತಿಸಿದಂತಾಗುತ್ತದೆ. ಯಾವುದೇ ಕಲೆ, ಕಲಾಪ್ರಕಾರಗಳು ನಿರ್ದಿಷ್ಟ ಜ್ಞಾನದ ಚೌಕಟ್ಟಿನಲ್ಲಿ ಹುಟ್ಟಿ ಹಾಕಲ್ಪಡುವುದಿಲ್ಲ. ಸಾಂದರ್ಭಿಕ ಹಾಗೂ ಅನುಭವ ಅಭಿವ್ಯಕ್ತಿಯಿಂದ ಅವು ಬೆಳೆಯುತ್ತ ಬಂದಿವೆ. ಅಂದರೆ ಮಾನವನ ಸಾಂಸ್ಕೃತಿಕ ಇತಿಹಾಸದಲ್ಲಿ ಒಂದೇ ಉದ್ದೇಶಕ್ಕಾಗಿ ಕಲೆ ಹುಟ್ಟಿಕೊಂಡಿರದೇ ವಿವಿಧ ಕಾರಣಗಳಿಗಾಗಿ ಅದು ರೂಪುಗೊಂಡು ದಿಗಂತವನ್ನು ವಿಸ್ತರಿಸಿಕೊಂಡಿದೆ. ಹಲವು ಕುತೂಹಲಗಳನ್ನು ಹುಟ್ಟಿಸುವ ಕಲೆಗಳು ನಮ್ಮ ಸಂಸ್ಕೃತಿ ಅಧ್ಯಯನಕ್ಕೆ ಪ್ರಧಾನ ಆಕರಗಳಾಗಿವೆ.[೧೨]

ಕಲೆಗಳ ಅಧ್ಯಯನದಿಂದ ತಿಳಿಯುವ ಮಹತ್ವದ ವಿಷಯಗಳಲ್ಲಿ ಕೆಲವು ಸಲ ಯಾವುದೇ ಕಲೆಗಳ ಪ್ರದರ್ಶನ ಸಂದರ್ಭದ ಹಿಂದಿನ ಆಶಯಗಳಲ್ಲಿ ಕಲೆಗಳು ಆ ಭಾಗದ ಮೂಲ ಸಂಸ್ಕೃತಿಯೊಂದರ ಕಡೆಗೆ ಬೆರಳುಮಾಡುತ್ತ, ಇತಿಹಾಸದ ಹಲವು ಕಾಲಘಟ್ಟಗಳಲ್ಲಿ ನಡೆದಿರಬಹುದಾದ ಸಾಂಸ್ಕೃತಿಕ ಸಂಘರ್ಷಗಳ ಕಡೆಗೆ ನಮ್ಮ ಗಮನ ಸೆಳೆಯುತ್ತವೆ.[೧೩] ಅಲ್ಲದೆ ಸಾಂಸ್ಕೃತಿಕ ಇತಿಹಾಸದ ಸಂದರ್ಭದಲ್ಲಿ ಇವು ಮಹತ್ವದ ಆಕರಗಳಾಗುವ ಸಾಧ್ಯತೆಯಿದೆ. ಯಾವುದೇ ಒಂದು ಸಂಸ್ಕೃತಿ ತಮ್ಮ ಸಾಮಾಜಿಕ ಬದಲಾವಣೆಯಲ್ಲಿ ಅನೇಕ ಆಯಾಮಗಳನ್ನು ಪಡೆದು, ಹೊಸ ಹೊಸ ನೆಲೆಗಳನ್ನೂ ಕಂಡುಕೊಳ್ಳುತ್ತಲೇ, ಪರಂಪರೆಗೆ ವಿವಿಧ ಮುಖಗಳ ಬದಲಾವಣೆಯೊನ್ನೂ ಸೇರಿಸುತ್ತದೆ. ಕಲಾಪ್ರಕಾರಗಳು ಅವುಗಳ ಅಭಿವ್ಯಕ್ತಿಯ ರೂಪಗಳು. ಇಲ್ಲಿ ಪುರಾವೆಗಳಾಗಿ ಉಳಿಯುತ್ತವೆ. ಹೀಗೆ ಉಳಿದು ಬಂದ ಭಿತ್ತಿಚಿತ್ರಗಳ ಅಧ್ಯಯನದಿಂದ ಅವು ರೂಪುಗೊಂಡ ಉದ್ದೇಶಗಳನ್ನು ಮತ್ತು ಸಾಮಾಜಿಕ ಬದಲಾವಣೆಯಲ್ಲಿ ವಹಿಸಿದ ಪಾತ್ರವನ್ನೂ ಕಂಡುಕೊಳ್ಳಬಹುದಾಗಿದೆ.[೧೪]

---

೧೦. Yashodhar Mathpal : Pre-Historic Rock Paintings of Bhimbetka, pp-1

೧೧. Ibid., pp-1

೧೨. ಡಾ. ಯಾದಪ್ಪ ಪರದೇಶಿ : ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ–ಒಂದು ಅಧ್ಯಯನ, ಅ.ಪ್ರ, ಪಿಹೆಚ್.ಡಿ ಮಹಾಪ್ರಬಂಧ, ಪು–೪

೧೩. ಹಿ. ಚಿ. ಬೋರಲಿಂಗಯ್ಯ (ಸಂ.) : ಕರ್ನಾಟಕ ಕಲೆಗಳ ಕೋಶ, ಪು–೩

೧೪. ಡಾ. ಯಾದಪ್ಪ ಪರದೇಶಿ : ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ–ಒಂದು ಅಧ್ಯಯನ, ಅ.ಪ್ರ, ಪಿಹೆಚ್.ಡಿ ಮಹಾಪ್ರಬಂಧ, ಪು–೩

ಭಾರತೀಯ ಚಿತ್ರಕಲಾ ಪರಂಪರೆಯಲ್ಲಿ ಕರ್ನಾಟಕ ಭಿತ್ತಿಚಿತ್ರಗಳಿಗೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಕನ್ನಡ ನಾಡಿನ ಜನತೆ ಭಿತ್ತಿಚಿತ್ರಗಳನ್ನು ರಚಿಸುವ ಮೂಲಕ ಕಲಾಕಾರರಾಗಿ, ಭಿತ್ತಿಚಿತ್ರಗಳನ್ನು ಬರೆಯಿಸುವುದರೊಂದಿಗೆ ಕಲಾ ಪೋಷಕರಾಗಿದ್ದಾರೆ. ಈ ಭಿತಿತಚಿತ್ರ ನಿರ್ಮಾಣ ಪರಂಪರೆಯನ್ನು ಜೀವಂತವಾಗಿರಿಸುವುದರ ಜೊತೆಗೆ ನಮ್ಮ ನಾಡನ್ನು ಸಂಪದ್ಭರಿತ ಪ್ರದೇಶವನ್ನಾಗಿ ಮಾಡಿದ್ದಾರೆ. ಹೀಗೆ ಈ ಭಿತ್ತಿಚಿತ್ರ ರಚನಾ ಪರಂಪರೆ ಪ್ರಾಗೈತಿಹಾಸಕ ಕಾಲದಿಂದ ಇಂದಿನವರೆಗೂ ಉಳಿದುಕೊಂಡು ಬಂದಿರುವುದಲ್ಲದೇ ವ್ಯಕ್ತಿಯಿಂದ ವ್ಯಕ್ತಿಗೆ, ಸಮುದಾಯದಿಂದ ಸಮುದಾಯಕ್ಕೆ, ಬೇರೆ ಬೇರೆಯಾಗಿ ಸೃಷ್ಟಿಗೊಂಡಿದೆ. ಪ್ರಾದೇಶಿಕತೆ, ಆ ಪ್ರದೇಶದ ಜನರ ಜೀವನ ವಿಧಾನ, ಆಚಾರ-ವಿಚಾರ, ಧಾರ್ಮಿಕ ನಂಬಿಕೆ ಮುಂತಾದವುಗಳು ಅವರ ಭಿತ್ತಿಚಿತ್ರ ರಚನೆಯ ಮೇಲೆ ಪ್ರಭಾವ ಬೀರಿ ಈ ಪರಂಪರೆ ವೈವಿಧ್ಯಮಯವಾಗಿ ರೂಪುಗೊಳ್ಳಲು ಕಾರಣವಾಗಿದೆ. ಯಾವುದೇ ಕಾಲದ ಭಿತ್ತಿಚಿತ್ರಗಳು ಆಯಾ ಕಾಲದ ಜನಜೀವನದ ವಿವರಗಳನ್ನು ಒಳಗೊಂಡಿರುತ್ತವೆ. ಹಾಗೆಯ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಇವು ಮಹತ್ವದ ಆಕರಗಳಾಗಿವೆ. ಭಿತ್ತಿಚಿತ್ರಗಳ ಅಧ್ಯಯನದಿಂದ ನಿರ್ಮಾತೃಗಳ ಇತಿಹಾಸ ಮತ್ತು ಅವುಗಳ ಪೋಷಕರು ಯಾವ ಕಾರಣ ಮತ್ತು ಉದ್ದೇಶಗಳಿಗಾಗಿ ಅವುಗಳನ್ನು ರಚಿಸಿದರು? ಎಂಬುದನ್ನು ತಿಳಿಯುವುದರ ಜೊತೆಗೆ ಶಿಲೆ, ಮಣ್ಣು, ಗಾರೆ, ಲೋಹ, ಗಾಜಿನ ಮಾಧ್ಯಮದಲ್ಲಿ ಭಿತ್ತಿಚಿತ್ರ ರಚನೆಗೊಂಡ ರೀತಿ, ಭಿತ್ತಿಸಿದ್ಧತಾ ವಿಧಾನ, ಚಿತ್ರರಚನೆ, ವರ್ಣಗಳ ತಯಾರಿಕೆ, ಚಿತ್ರರಚನಾ ಪರಿಕರಗಳು ಮುಂತಾದ ಚಿತ್ರಕಲಾ ಕ್ಷೇತ್ರದ ಹಲವಾರು ತಾಂತ್ರಿಕ ಅಂಶಗಳನ್ನು ತಿಳಿದುಕೊಳ್ಳಬಹುದಾಗಿದೆ.[೧೫]

ಭಿತ್ತಿಚಿತ್ರಕಲಾ ಪರಂಪರೆಯನ್ನು ನಮ್ಮ ಪೂರ್ವಜರು ಧರ್ಮಪ್ರಚಾರದ ಸಾಧನವಾಗಿ, ಸಮಾಜವನ್ನು ರೂಪಿಸುವಲ್ಲಿ, ಮನೆರಂಜನೆಗಾಗಿ, ವೈಯಕ್ತಿಕ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಗಾಗಿ, ರಾಜಕೀಯ ಉದ್ದೇಶಗಳಿಗಾಗಿ ಬಳಸಿಕೊಂಡರುವ ವಿಧಾನವನ್ನು ಅಧ್ಯಯನ ಮಾಡುವುದರ ಜೊತೆಗೆ ಭಿತ್ತಿಚಿತ್ರಗಳ ಶೈಲಿ ಕಾಲದಿಂದ ಕಾಲಕ್ಕೆ ಬದಲಾದ ಅವುಗಳ ಬಳಕೆ, ಭಿತ್ತಿಚಿತ್ರಗಳ ತೌಲನಿಕ ಅಧ್ಯಯನದಿಂದ ಕಂಡುಬರುವ ಮಹತ್ವದ ಅಂಶಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಸ್ಥೂಲವಾಗಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

**ಭಿತ್ತಿಸಿದ್ಧತೆ**

ಭಿತ್ತಿಯ ಮೇಲೆ ಚಿತ್ರ ಬರೆಯುವ ಮೊದಲು ಭಿತ್ತಿಯನ್ನು ಸಿದ್ಧಗೊಳಿಸುವ ಕ್ರಿಯೆಯನ್ನೇ ಭಿತ್ತಿಸಿದ್ಧತೆ ಎಂದು ಕರೆಯುತ್ತಾರೆ. ಈ ಭಿತ್ತಿಯನ್ನು ಪ್ರಾಚೀನ ಕಾಲದಿಂದ ಹಲವಾರು ರೀತಿಯಲ್ಲಿ ಸಿದ್ಧಮಾಡಿಕೊಳ್ಳುತ್ತಿದ್ದ ವಿವರಗಳು ಸಿಗುತ್ತವೆ. "ಇಟ್ಟಿಗೆ ಪುಡಿ, ಜೇನು ಬೆಲ್ಲ, ಅತಿಮಧುರ, ನೀರು ಮುಂತಾದವುಗಳನ್ನು ಸಮ

೧೫. ಡಾ. ಯಾದಪ್ಪ ಪರದೇಶಿ : ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ-ಒಂದು ಅಧ್ಯಯನ, ಅ.ಪ್ರ, ಪಿಹೆಚ್.ಡಿ ಮಹಾಪ್ರಬಂಧ, ಪು-೨

ಪ್ರಮಾಣದಲ್ಲಿ ಮಿಶ್ರಣವಾಡಿ ಶುಚಿಗೊಳಿಸಿದ ಹಾಗೂ ನಯವಾದ ಗೋಡೆಗಳ ಮೇಲೆ ತೆಳ್ಳಗೆ ಲೇಪಿಸುತ್ತಿದ್ದರೆಂದು ತಿಳಿದು ಬರುತ್ತದೆ. ಇದು ಅನಂತರ ಬಳಿಯುವ ವಜ್ರಲೇಪನವು ಬಿಗಿಯಾಗಿ ಹಿಡಿದುಕೊಳ್ಳಲು ಸಹಕಾರಿ, ಅಲ್ಲದೆ ಗುಗ್ಗುಲು, ಜೇನುಮೇಣ, ಅತಿಮಧುರ, ಮುರು, ಬೆಲ್ಲ, ಕುಸುಂಬ ಇಷ್ಟನ್ನೂ ಪುಡಿಮಾಡಿ ಸಮಾಂಶದಲ್ಲಿ ಮಿಶ್ರಮಾಡಿ, ಮಣ್ಣಿನೊಡನೆ ಕಲಸುವ ಮತ್ತೊಂದು ರೀತಿಯೂ ವಿಷ್ಣುಧರ್ಮೋತ್ತರದ ಮೂಲಕ ತಿಳಿದುಬರುತ್ತದೆ. ಈ ಮಿಶ್ರಣದ ಮುಕ್ಕಾಲು ಭಾಗದಷ್ಟು ಬಿಲ್ವಪತ್ರೆಯ ಕಾಯಿಯ ಅಂಟನ್ನೂ ಸಾಕಷ್ಟು ಮರಳನ್ನೂ ಸೇರಿಸಿ ಚೆನ್ನಾಗಿ ಅರೆದು ನೀರಿನಲ್ಲಿ ನೆನೆಸಿ ಪಕ್ವಗೊಳಿಸುತ್ತಿದ್ದರು. ಒಣಗಿದ ಗೋಡೆಯ ಮೇಲೆ ಈ ಮಿಶ್ರಣ ಮೃದು ಲೇಪನವಾದ ಮೇಲೆ ಸಮೀಚೀನ ಭಾಗಗಳೂ ಮುಚ್ಚಿಕೊಳ್ಳುವಂತೆ ಸರ್ಜರಸ ಹಾಗೂ ತೈಲಗಳಿಂದ ಉಜ್ಜಿ ನಯನ ಮಾಡಿಕೊಳ್ಳುವರು. ಆಗಾಗ ಹಾಲನ್ನು ಅದರ ಮೇಲೆ ಚುಮುಕಿಸುವ ಪದ್ಧತಿಯು ಇದ್ದಿತು.[೧೬] ಹೀಗೆ ಭಿತ್ತಿ ಸಿದ್ಧತೆಯನ್ನು ಕುರಿತು ಹಲವಾರು ಗ್ರಂಥಗಳು ಹಲವಾರು ಮಹಿತಿಯನ್ನು ನೀಡುತ್ತವೆ. ಆದರೆ ಪ್ರಾಗೈತಿಹಾಸಿಕ ಕಾಲದ ಭಿತ್ತಿಸಿದ್ಧತೆಯ ಬಗ್ಗೆ ನಮಗೆ ಯಾವುದೇ ದಾಖಲೆಗಳು ಲಭ್ಯವಿರುವುದಿಲ್ಲ. ಅವರು ದುರ್ಗಮವಾದ ಯಾರಿಗೂ ನಿಲುಕದೇ ಇರುವ ಎತ್ತರದ ಸ್ಥಳದಲ್ಲಿ ಕಲ್ಲಿನ, ಬೃಹತ್ ಬಂಡೆಯ ಆಸರೆಯಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ತಮಗೆ ಆ ಕಾಲದಲ್ಲಿ ಸಿಗುವ ಗಿಡಮೂಲಿಕೆಗಳ ಅಥವಾ ಹೂ ಹಣ್ಣುಗಳ, ಎಲೆಗಳ ರಸದಿಂದ ಇಲ್ಲವೆ ಬಣ್ಣದ ಕಲ್ಲುಗಳಿಂದ ವರ್ಣವನ್ನು ತಯಾರಿಸಿಕೊಂಡಿರಬೇಕು. ಇಲ್ಲವೇ ಪ್ರಾಣಿಗಳ ರಕ್ತವನ್ನೇ ನೇರವಾಗಿ ಉಪಯೋಗಿಸಿಕೊಂಡಿರಲುಬಹುದು. ಆದರೆ ಇದುವೇ ನಿಜವೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗಿಲ್ಲ. ಶಿಷ್ಟಪದ ಭಿತ್ತಿಸಿದ್ಧತೆಯ ಬಗ್ಗೆ ಮಾತ್ರ ವಿವರಗಳು ಮೇಲಿನ ಗ್ರಂಥಗಳಲ್ಲಿ ಲಭ್ಯವಿರುತ್ತದೆ.

### ಭಿತ್ತಿಚಿತ್ರ ರಚನೆ

ಗೋಡೆಗಳನ್ನು ಚಿತ್ರರಚನೆಗೆ ಹದಮಾಡಿಕೊಳ್ಳುವುದು ಪ್ರಮುಖ ಕಾರ್ಯವಾಗಿದೆ. ನಂತರವೇ ಅದರ ಮೇಲೆ ಚಿತ್ರರಚನೆ ಸಾಗಬೇಕು. ಆ ಅಂಶಗಳ ಬಗೆಗೂ ಸಿಗುವ ವಿವರಗಳು ಆಸಕ್ತಿದಾಯಕವಾಗಿವೆ. ಹಳದಿ ಮತ್ತು ಕೆಂಪು ವರ್ಣಗಳಲ್ಲಿಹೊರ ರೇಖೆಗಳನ್ನು ಬಿಡಿಸಬಹುದೆಂದು "ವಿಷ್ಣುಧರ್ಮೋತ್ತರ ಪುರಾಣ" ಹೇಳುತ್ತದೆ. ಚಿತ್ರ ರಚನೆಗೆ ಮುಂಚೆ ಕಲಾಕೃತಿಯ ನಿಜ ಪ್ರಮಾಣವನ್ನು ಊಹಿಸಿಕೊಂಡು, ಅದರ ಒಂದು ಮಾದರಿಯನ್ನು ನೆಲದ ಮೇಲೆ ಮೊದಲು ಬರೆದುಕೊಳ್ಳಬೇಕೆಂದು 'ಅಭಿಲಾಷಿತಾರ್ಥ ಚಿಂತಾಮಣಿ' ಹೇಳುತ್ತದೆ. ಹಸುವಿನ ಸಗಣಿಯ ಒಣಗಿದ ಪುಡಿಯನ್ನು ಹಳದಿಕಿಟ್ಟದ ಪುಡಿಯೊಡನೆ ಬೆರಸಿ, ಅದು ಮೇಣವಾಗುವಂತೆ ಅರೆದು ಲೇಖನಿಯನ್ನು ಸಿದ್ಧಗೊಳಿಸುತ್ತಿದ್ದರು. ಒಳ್ಳೆಯ ನಕ್ಷತ್ರದಲ್ಲಿ ಮನಸ್ಸು ಶಾಂತರೀತಿಯಲ್ಲಿರುವಾಗ ಸ್ಥಿರ ಮನಸ್ಸಿನಲ್ಲಿ

೧೬. ಡಾ. ಎಸ್. ಸಿ. ಪಾಟೀಲ (ಸಂ.) : ಚಿತ್ರಾಕ್ಷಿ, ಪು-೩೪

ಕುಳಿತು ಈ ಲೇಖನಿಯಿಂದ ನೆಲದಮೇಲೆ ಬಿಡಿಸಿಕೊಂಡಿರುವ ಚಿತ್ರದಂತೆ ಗೋಡೆಗಳ ಮೇಲೆ ಆಕೃತಿಗಳನ್ನು ಬಿಡಿಸುವರು. ಬಿಳುಪು, ಹಳದಿ, ನೀಲಿ ಮುಂತಾದ ಬಣ್ಣಗಳು ಎಲ್ಲೆಲ್ಲಿ ಬರಬೇಕೆಂಬುದನ್ನು ಈ ಲೇಖನಿಯಿಂದಲೇ ಗುರುತಿಸಿ ಅನಂತರ ಜಾಗರೂಕತೆಯಿಂದ ಉಳಿದ ಭಾಗಗಳಿಗೆ ಕೆಂಪು ಬಣ್ಣವನ್ನು ಹಾಕುವರು. ೭ನೇ ಶತಮಾನದ ಚಿತ್ತಾನುವಾಸಲ್ ಭಿತ್ತಿಚಿತ್ರಗಳಿಗೆ ಕೆಂಪುಬಣ್ಣದಲ್ಲಿ ಬಾಹ್ಯ ರೇಖೆಗಳನ್ನು ಬರೆದಿರುವುದು ಕಂಡುಬರುತ್ತದೆ. ಅನಂತರ ಕಪ್ಪುಬಣ್ಣವನ್ನು ಬಳಸಲಾಗಿದೆ. ನೈಜರೀಯ ಚಿತ್ರಗಳ ಹೊರ ರೇಖೆಗಳಿಗೂ ಹೀಗೆ ಕೆಂಪನ್ನು ಬಳಸಿ ಅನಂತರ ಒಂದು ಬಗೆಯ ಕಂದು ಬಣ್ಣದ ಛಾಯೆಯನ್ನುಕೊಟ್ಟು ಸ್ಫುಟಗೊಳಿಸಿರುವುದು ಕಂಡುಬರುತ್ತದೆ.[೧೭] ಹೀಗೆ ಭಿತ್ತಿಯ ಮೇಲೆ ಚಿತ್ರ ರಚನಾ ವಿಧಾನವನ್ನು ವಿಷ್ಣುಧರ್ಮೋತ್ತರ ಪುರಾಣ ಮತ್ತು ಅಭಿಲಾಷಿತಾರ್ಥ ಚಿಂತಾಮಣಿ ಗ್ರಂಥಗಳು ತಿಳಿಸಿಕೊಡುತ್ತವೆ.

ಇನ್ನು ಬಣ್ಣಗಳ ಸಿದ್ಧತಾ ವಿಧಿ-ವಿಧಾನಗಳದೇ ಒಂದು ದೊಡ್ಡ ಪರಂಪರೆಯಿದೆ. ಇಂದು ಆಧುನಿಕ ವರ್ಣಗಳ ಬಳಕೆ ಇರುವುದನ್ನು ಕಂಡರೂ ಈ ಬಣ್ಣಗಳಿಗೆ ಪ್ರಾಚೀನ ನೈಸರ್ಗಿಕವಾದ ವರ್ಣಗಳೇ ಆಧಾರವಾಗಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಪ್ರಾಗೈತಿಹಾಸಿಕ ಕಾಲದ ವರ್ಣಗಳು ನಿಸರ್ಗ ಮೂಲವಾದವುಗಳು. ಶಿಷ್ಟಪದ ಭಿತ್ತಿಚಿತ್ರಕಲೆಯ ವರ್ಣಗಳು ೧೮ನೆಯ ಶತಮಾನದವರೆಗೆ ಬಹುಪಾಲು ನೈಸರ್ಗಿಕವಾದವುಗಳೇ ಆಗಿವೆ. ನಂತರದ ದಿನಗಳಲ್ಲಿ ಬಂದ ವರ್ಣಗಳು ರಾಸಾಯನಿಕವಾದುದಾಗಿದೆ.

### ೧. ಪ್ರಾಗೈತಿಹಾಸಿಕ ಭಿತ್ತಿಚಿತ್ರ ಪರಂಪರೆ

ವಿಶ್ವದಲ್ಲಿ ಅತೀ ಪ್ರಾಚೀನ ಚಿತ್ರಕಲೆಯ ಇಂತಹ ಕುರುಹುಗಳು ಸ್ಪೇನಿನ ಗವಿಗಳಲ್ಲಿ ಫ್ರಾನ್ಸಿನ ಡೋರಡೋನ್ ಪ್ರಾಂತದ ಲಾಗ್ರೀಜ್ ಗವಿಗಳಲ್ಲಿ ದೊರಕಿವೆ. ಸುಮಾರು ೨೭೦೦೦ ವರ್ಷಗಳ ಹಿಂದೆ ಅರಿನೇಷಿಯನ್ ನಾಗರಿಕತೆಯ ಕಾಲದಲ್ಲಿ ಮನುಷ್ಯನ ಪ್ರಾಚೀನ ಕಲಾಕೃತಿಗಳು ದೊರೆಯುತ್ತವೆ. ಕಾಡುಕೋಣ, ಕುದುರೆ, ಕರಡಿ ಮುಂತಾದ ಪ್ರಾಣಿಗಳ ಆಕೃತಿಗಳು. ಮಾನವಾ ಕೃತಿಯ ಚಿತ್ರಗಳು ಬೇಟೆ, ಕೃಷಿ, ಮಂತ್ರಮಾಟಗಳಿಗೆ ಸಂಬಂಧಿಸಿದವುಗಳು ಹೆಚ್ಚಾಗಿ ಕಂಡುಬಂದಿವೆ. ಆಫ್ರಿಕಾ, ಅಮೇರಿಕಾ, ಇಜಿಪ್ತ, ಏಷ್ಯಾ ಮತ್ತು ಯುರೋಪ ಖಂಡಗಳಲ್ಲಿ ಇವು ಹೇರಳವಾಗಿ ಕಂಡುಬರುತ್ತವೆ. ಭಾರತದಲ್ಲಿಯೂ ಇಂತಹ ಗುಹಾ ಚಿತ್ರಗಳು ಶೋಧವಾಗಿವೆ. ಪರ್ಷಿಬ್ರೌನರು, ಪ್ರಾಕ್ತನ ಮಾನವರ ಕಲಾಕೃತಿಗಳನ್ನು ತಮ್ಮ ಗ್ರಂಥದಲ್ಲಿ ಉಲ್ಲೇಖಿಸುತ್ತ ಅವು ಹತ್ತುಸಾವಿರ ವರ್ಷಗಳ ಹಿಂದೆ ನಿರ್ಮಾಣಗೊಂಡಿರುವ ಸಾಧ್ಯತೆಯಿರುವುದನ್ನು ತಿಳಿಸುತ್ತಾರೆ. ಸಿಂಗನಪುರ (ಮಧ್ಯ ಪ್ರದೇಶದ ರಾಯಘಡ್ ಸಂಸ್ಥಾನ)ದಲ್ಲಿ ಇರುವ ಗುಹಾಚಿತ್ರಗಳು ಬೇಟೆಯ ಕುಣಿತದ ಆನೆ, ಮೊಲ,

---

೧೭. ಡಾ. ಎಸ್. ಸಿ. ಪಾಟೀಲ (ಸಂ.) : ಚಿತ್ರಾಕ್ಷಿ, ಪು-೩೪-೩೫

ಜಿಂಕೆಯಂತಹ ಚಿತ್ರಗಳು ಇಲ್ಲಿಯ ಓಡುವ ಕುದುರೆ, ಅಲ್ಟಾಮೈರಾದ ಓಡುವ ಕುದುರೆಯನ್ನು ಹೋಲುತ್ತವೆ. ಸ್ಪೇನಿನ ಶಿಲಾಶ್ರಯದ ಚಿತ್ರಗಳಂತೆ ಆಫ್ರಿಕಾದ ಬುಷಮನ್ ಗವಿಯ ಚಿತ್ರಗಳಂತೆ ಇಲ್ಲಿಯ ಚಿತ್ರಗಳು ರಚನೆಗೊಂಡಿರುವುದು ಕುತುಹಲದ ಸಂಗತಿಯಾಗಿದೆ. ಡಾ. ಅ. ಸುಂದರ ಅವರು ಭಾರತದಲ್ಲಿ ೫೦೦೦ಕ್ಕೂ ಮಿಕ್ಕಿದ ಇಂತಹ ಗುಹಾಚಿತ್ರಗಳ ನೆಲೆಗಳು ಶೋಧವಾಗಿವೆ ಎನ್ನುತ್ತಾರೆ. ಮಧ್ಯ ಪ್ರದೇಶ, ಉತ್ತರಪ್ರದೇಶ, ಗುಜರಾತ, ರಾಜಸ್ಥಾನ, ಆಂಧ್ರಪ್ರದೇಶ, ತಮಿಳುನಾಡು, ಕೇರಳ, ಕರ್ನಾಟಕಗಳಲ್ಲಿ ಇವು ಹೇರಳವಾಗಿ ಶೋಧವಾಗಿವೆ. ಭೋಪಾಲದ ಬಿಂಬೇಟ್ಕಾ ಗುಡ್ಡಗಳ ಚಿತ್ರಗಳು ಕರ್ನಾಟಕದ ಬಾದಾಮಿ, ಹಿರೇಬೆನಕಲ್ಲ, ಬಿಲ್ಲಮರಾಯನಗುಡ್ಡದ ಗವಿವರ್ಣ ಚಿತ್ರಗಳು ಪಾಶ್ಚಿಮಾತ್ಯ ವಿದ್ವಾಂಸರ ಗಮನ ಸೆಳೆದಿವೆ. ಕರ್ನಾಟಕದಲ್ಲಿ ಬಾಗಲಕೋಟ ಜಿಲ್ಲೆಯ ಬಾದಾಮಿ, ಸಿಡ್ಲಪಡಿ, ಸೀತಿದೋಣಿ, ಹೊಸಮಹಾಕೂಟ, ಐಹೊಳೆ, ಯಲ್ಲಟ್ಟಿ, ನೂರಾಳಪಡಿ; ಗುಲಬರ್ಗಾ ಜಿಲ್ಲೆಯ ಬಲಿಚಕ್ರ; ಕೊಪ್ಪಳ ಜಿಲ್ಲೆಯ ಹಿರೇಬೆನಕಲ್, ಚಿಕ್ಕರಾಮಾಪುರ, ವೆಂಕಟಾಪುರ, ಆನೆಗುಂದಿ, ಅಂಜನಹಳ್ಳಿ, ನಾರಾಯಣಪುರ, ಮಲಪುರಾ, ಬಿಳೇಬಾವಿ, ತಿಮ್ಮಲಾಪುರ, ಹಿಕ್ಕಿಹಾಳ, ತೊಗಲಗುಡ್ಡ, ಶಿರವಾರ, ಬೈಲಮರ್ಜಡ್, ಮಾನ್ವಿ, ಕೊಪ್ಪಳ; ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟ, ಹಂಪಿ, ಸಂಗನಕಲ್ಲು, ಕುರುಗೋಡು; ಬೆಳಗಾವಿ ಜಿಲ್ಲೆಯ ರಾಮದುರ್ಗ; ಚಿತ್ರದುರ್ಗ, ಚಂದ್ರವಳ್ಳಿ, ಬ್ರಹ್ಮಗಿರಿ ಮುಂತಾದ ಸ್ಥಳಗಳಲ್ಲಿ ಗವಿವರ್ಣ ಚಿತ್ರಗಳ ನೆಲೆಗಳು ಶೋಧವಾಗಿವೆ.[೧೮] ವಿಶೇಷವಾಗಿ ಇಲ್ಲಿ ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯನ್ನು ಅಧ್ಯಯನ ಮಾಡಲಾಗಿದೆ.

**೨. ಉತ್ತರ ಕರ್ನಾಟಕದ ಶಿಷ್ಟಪದ ಭಿತ್ತಿಚಿತ್ರ ಪರಂಪರೆ**

ನಾಗರಿಕತೆಯ ಚೌಕಟ್ಟಿಗೆ ಒಳಪಟ್ಟ ಮಾನವನ ಬದುಕಿನ ಚಿತ್ರಕಲೆಯನ್ನು ಶಿಷ್ಟಪದ ಭಿತ್ತಿಚಿತ್ರಕಲೆ ಎಂದು ಗುರುತಿಸಬಹುದಾಗಿದೆ.[೧೯] ಹೀಗೆ ಶಿಷ್ಟಾಚಾರಕ್ಕೊಳಗಾದ ಚಿತ್ರಕಲಾ ಸಂಪ್ರದಾಯವು ಶಾಸ್ತ್ರೋಕ್ತವಾಗಿ ಭಿತ್ತಿಗಳ ಮೇಲೆ ಅನಾವರಣಗೊಂಡಿರುವುದು ಜಗತ್ತಿನಾದ್ಯಂತ ಕಂಡುಬರುತ್ತದೆ. ಕರ್ನಾಟಕದಲ್ಲಿ ಶಿಷ್ಟಪದ ಭಿತ್ತಿಚಿತ್ರಕಲೆ ವಿಶೇಷವಾಗಿ ಗುಹಾಲಯಗಳಲ್ಲಿ, ದೇವಾಲಯಗಳಲ್ಲಿ, ಅರಮನೆಗಳಲ್ಲಿ, ಮಸೀದಿಗಳಲ್ಲಿ ಮಠಗಳಲ್ಲಿ, ಚರ್ಚುಗಳಲ್ಲಿ, ಮನೆ-ಮಂದಿರಗಳಲ್ಲಿ ಭಿತ್ತಿಚಿತ್ರಗಳಿರುವುದನ್ನು ಡಾ. ಯಾದಪ್ಪ ಪರದೇಶಿಯವರು ಗುರುತಿಸಿ ಅಧ್ಯಯನ ಮಾಡಿದ್ದಾರೆ.

೧. **ಮಾನವ ನಿರ್ಮಿತ ಗುಹಾಲಯಗಳಲ್ಲಿರುವ ಚಿತ್ರಗಳ ನೆಲೆಗಳು :-** ಐಹೊಳೆಯ ರಾವಣಫಡಿ ಗುಹೆ ಮತ್ತು ಬಾದಾಮಿಯ ವೈಷ್ಣವ ಗುಹೆ.

೧೮. ಡಾ. ಎಸ್. ಸಿ. ಪಾಟೀಲ (ಸಂ.) : ಚಿತ್ರಾಕ್ಷಿ, ಪು-೧೧-೧೨

೧೯. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪು-೧೦

**೨. ದೇವಾಲಯಗಳಲ್ಲಿರುವ ಭಿತ್ತಿಚಿತ್ರಗಳ ನೆಲೆಗಳು :-** ವಿರೂಪಾಕ್ಷೇಶ್ವರ ದೇವಾಲಯ, ಹಂಪಿ, ವಿಠ್ಠಲ ದೇವಾಲಯ ಹಂಪಿ, ಕನಕಾಚಲಪತಿ ದೇವಾಲಯ ಕನಕಗಿರಿ, ವೆಂಕಟೇಶ್ವರ ದೇವಾಲಯ ನರಗುಂದ, ಯಲ್ಲಮ್ಮ ದೇವಾಲಯ ಉಪ್ಪಿನಬೆಟಗೇರಿ, ಶ್ರೀರಾಮ ದೇವಾಲಯ, ಬಿ.ಕೆ. ಹಳ್ಳಿ.

**೩. ಅರಮನೆಯಲ್ಲಿರುವ ಭಿತ್ತಿಚಿತ್ರಗಳ ನೆಲೆಗಳು :-** ರಂಗೀನ್ ಮಹಾಲ್ ಬೀದರ್, ಅಸರ್ ಮಹಾಲ್ ವಿಜಯಪುರ, ಬೇಸಿಗೆ ಅರಮನೆ ಕುಮಟಗಿ, ನರಗುಂದದ ಅರಮನೆ, ರಾಜವಾಡೆ ನಿಪ್ಪಾಣಿ, ನಿಪ್ಪಾಣಿಕರ್ ವಾಡೆ ಅಥಣಿ, ನಾಯಕರ ಅರಮನೆ ಸುರಪುರ, ನವಾಬರ ವಾಡೆ ಸವಣೂರು ಹಾಗೂ ರಾಮದುರ್ಗದ ವಾಡೆ.

**೪. ಮಸೀದಿಗಳಲ್ಲಿರುವ ಭಿತ್ತಿಚಿತ್ರಗಳ ನೆಲೆಗಳು :-** ತಾಜುದ್ದೀನ ಫೀರೋಜನ ಸಮಾಧಿ ಗುಲಬಾರ್ಗ, ಬಂದೇನವಾಜ್ ದರ್ಗಾ ಗುಲಬಗಾ, ಶಹಾಕಮಾಲ್ ಮುಜಾರ‍್ರದನ ದರ್ಗಾ ಗುಲಬರ್ಗಾ ಹಾಗೂ ಬಹಾಮೀ ಸಮಾಧಿಗಳು ಅಸ್ತೂರ.

**೫. ಮಠಗಳಲ್ಲಿರುವ ಭಿತ್ತಿಚಿತ್ರಗಳ ನೆಲೆಗಳು :-** ಆನೆಗುಂದಿಎಯ ಹುಚ್ಚಪ್ಪಯ್ಯನ ಮಠ, ಅಥಣಿಯ ಗಚ್ಚಿನಮಠ, ಅಮ್ಮಿನಭಾವಿಯ ಪಂಚಗೃಹ ಹಿರೇಮಠ, ಮಹಾಲಿಂಗಪುರದ ಮಹಾಲಿಂಗೇಶ್ವರಮಠ, ಸುರಪುರದ ವಿರಕ್ತಮಠ ಹಾಗೂ ಸುರಪುರದ ಅಣ್ಣಯ್ಯನಮಠ.

**೬. ಚರ್ಚ್‌ಗಳಲ್ಲಿರುವ ಭಿತ್ತಿಚಿತ್ರಗಳ ನೆಲೆಗಳು :-** ಸೇಂಟ್ ಮೇರಿ ಚರ್ಚ್ ಬೆಳಗಾವಿ ಮತ್ತು ಸೇಂಟ್ ಕ್ಸೇವಿಯರ್ ಚರ್ಚ್, ಬೆಳಗಾವಿ.

**೭. ಮನೆಗಳಲ್ಲಿರುವ ಭಿತ್ತಿಚಿತ್ರಗಳ ನೆಲೆಗಳು :-** ಗುಳೇದಗುಡ್ಡದ ಹೊಸಮನಿಗೌಡರ ಮನೆ, ನರಗುಂದದ ಹಸಬಿಯವರ ಮನೆ, ಸಂಕೇಶ್ವರದ ಮಮದಾಪುರರ ಮನೆ ಹಾಗೂ ರಾಯಚೂರಿನ ಖಾಜಿನಗೌಡರ ಮನೆ.

ಹೀಗೆ ಉತ್ತರಕರ್ನಾಟಕದಲ್ಲಿರುವ ಭಿತ್ತಿಚಿತ್ರಗಳ ನೆಲೆಗಳನ್ನು ಈಗಾಗಲೇ ಅನೇಕ ವಿದ್ವಾಂಸರು ಅಧ್ಯಯನ ಮಾಡಿರುವುದು ಗಮನಿಸಬಹುದಾಗಿದೆ. ವಿಶೇಷವಾಗಿ ರಾಯಚೂರಿನ ಜಿಲ್ಲೆಯಲ್ಲಿ ಈ ಶಿಷ್ಟಪದ ಭಿತ್ತಿಚಿತ್ರಗಳ ನೆಲೆಗಳೆಂದರೆ ಖಾಜಿನಗೌಡರ ಮನೆ ಮತ್ತು ಹನುಮಾನ ದೇವಾಲಯದಲ್ಲಿರುವ ಭಿತ್ತಿಚಿತ್ರಗಳ ವಸ್ತುವಿಷಯ, ಕಾಲಮಾನ ಮುಂತಾದ ಕುರಿತು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

❑❑❑

## ಅಧ್ಯಾಯ – ನಾಲ್ಕು

# ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆ

ಮಾನವನ ಸೃಜನಶೀಲ ಮನಸ್ಸಿನ ಅಭಿವ್ಯಕ್ತಿಯ ರೂಪಗಳಲ್ಲೊಂದಾದ ಚಿತ್ರಕಲೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಹಲವು ಉದ್ದೇಶ ಮತ್ತು ಮಾಧ್ಯಮಗಳನ್ನಾಧರಿಸಿ ರಚನೆಯಾಗುತ್ತ ಬಂದಿದೆ. ಪ್ರಾಗೈತಿಹಾಸಿಕ ಕಾಲದಲ್ಲಿ ಆದಿಮಾನವರಿಂದ ಗುಹೆಗಳಲ್ಲಿ ರಚನೆಯಾದ ಭಿತ್ತಿಚಿತ್ರಗಳು, ಚಿತ್ರಕಲೆಯ ಪ್ರಾರಂಭಿಕ ಹಂತವನ್ನು ಪ್ರತಿನಿಧಿಸುವುದರ ಜೊತೆಗೆ ಅವರ ಸೌಂದರ್ಯಾನುಭೂತಿ, ಜೀವನ ವಿಧಾನ, ಧಾರ್ಮಿಕ ಮತ್ತು ತಾಂತ್ರಿಕ ಆಚರಣೆಗಳಂತಹ ವಿಷಯಗಳನ್ನು ತಿಳಿಸಿಕೊಂಡುವ[೧೧] ಆಕರಗಳಾಗಿವೆ. ಪ್ರಾಗೈತಿಹಾಸಿಕ ಮಾನವರ ಈ ಭಿತ್ತಿಚಿತ್ರಕೃತಿಗಳು ಸಾಮಾನ್ಯವಾಗಿ ಗುಡ್ಡ ಬೆಟ್ಟದ ಶಿಲಾಶ್ರಯಗಳಲ್ಲಿ ಮತ್ತು ಗುಹೆಗಳ ಗೋಡೆಗಳ ಮೇಲೆ ರಚನೆಯಾಗಿರುವುದರಿಂದ ಇವುಗಳನ್ನು ಶಿಲಾಶ್ರಯ ಇಲ್ಲವೇ ಗುಹಾ ಭಿತ್ತಿ ಚಿತ್ರಗಳು ಎಂಬುದಾಗಿ ಕರೆಯುತ್ತಾರೆ.

ಗುಹಾ ಭಿತ್ತಿಚಿತ್ರಗಳ ರಚನೆ ಎಂದಿನಿಂದ ಪ್ರಾರಂಭವಾಯಿತು ಎಂದು ನಿಖರವಾದ ಕಾಲಸೂಚಿಸಿ ಹೇಳಲು ಸಾಧ್ಯವಿಲ್ಲವಾದರೂ, ಮಾನವನ ವಿಕಸಿಸುತ್ತಿರುವ ಮನಸ್ಸು ಸೃಷ್ಟಿಯಲ್ಲಿ ಅಡಗಿದ ಚಲುವಿನ ಕಡೆ ಹರಿದಾಗ ಚಿತ್ರದ ಮೂಲಕ ಅಭಿವ್ಯಕ್ತಿ ಪಡೆಯಿತು[೧೨] ಎನ್ನಬಹುದು. ಈ ಹಂತದಲ್ಲಿ ಆತ ತನ್ನ ಆಯುಧಗಳನ್ನು ಚಲುವುಗೊಳಿಸುವುದು. ಮೈಮೇಲೆ ಬಣ್ಣ ಬಣ್ಣದ ಚಿತ್ತಾರ ಬರೆದುಕೊಂಡು ಅಲಂಕರಿಸಿಕೊಳ್ಳುವುದರ ಜೊತೆಗೆ, ತಾನು ವಾಸಿಸುತ್ತಿದ್ದ ಗುಹೆಗಳ ಗೋಡೆಗಳನ್ನು ಚಿತ್ರ ಬರೆದು

---

೧೧. ಯಾದಪ್ಪ ಪರದೇಶಿ : ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ – ಒಂದು ಅಧ್ಯಯನ, ಪು-೩೦೪

೧೨. ಡಾ. ಅ. ಸುಂದರ : ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ, ಪು-೦೯

ಅಂದಗೊಳಿಸಲು ತೊಡಗಿದನು. ಆದಿಮಾನವನ ಗುಹಾ ಭಿತ್ತಿಚಿತ್ರ ರಚನೆ ಪ್ರಾರಂಭದಲ್ಲಿ ಸಹಜವಾಗಿ ಅಭಿವ್ಯಕ್ತಗೊಂಡ ಸೌಂದರ್ಯದ ಹಿನ್ನೆಲೆಯಲ್ಲಿ ರಚನೆಯಾದರೂ ನಂತರದಲ್ಲಿ ಬೇರೆ ಬೇರೆ ಉದ್ದೇಶಗಳಿಗಾಗಿಯೂ ರೂಪಗೊಳ್ಳತೊಡಗಿದಂತೆ ಕಂಡುಬರುತ್ತದೆ. ಇಂತಹ ಚಿತ್ರಗಳು ರಾಯಚೂರು ಜಿಲ್ಲೆಯ ಅನೇಕ ಕಡೆಗಳಲ್ಲಿ ಕಂಡುಬಂದಿವೆ. ಪ್ರಮುಖವಾಗಿ ಈ ಕೆಳಗಿನ ನೆಲೆಗಳಲ್ಲಿ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕಂಡುಬಂದಿವೆ.

**ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಪ್ರಮುಖ ನೆಲೆಗಳು**

೦೧. ಗಬ್ಬೂರು

೦೨. ಮಲ್ಲದಕಲ್ಲು

೦೩. ಬಿಲ್ಲಮರಾಯನಗುಡ್ಡ

೦೪. ಆತನೂರು

೦೫. ಶಿರವಾರ

೦೬. ಮಸ್ಕಿ

೦೭. ಬೈಲಮರ್ಚಡ್

೦೮. ಕಲ್ಲೂರು

೦೯. ಮಾನ್ವಿ

೧೦. ಪಿಕ್ಕಿಹಾಳ

**೧. ಗಬ್ಬೂರಿನ ಪ್ರಾಗೈತಿಹಾಸಿಕ ಚಿತ್ರಗಳು**

ಗಬ್ಬೂರಿನ ಶ್ರೀ ಸಿದ್ದೇಶ್ವರ ದೇವಾಲಯದ ಹಿಂಬದಿ ಮತ್ತು ಶ್ರೀ ಸೂಗೂರೇಶ್ವರ ದೇವಾಲಯದ ಹಿಂಬದಿಯಲ್ಲಿ ಒಂದು ಬೃಹತ್ ಬಂಡೆಯ ಕೆಳಭಾಗದಲ್ಲಿ ಚಾಚು ಬಂಡೆಯ ಆಸರೆಯಂತೆ ಇದ್ದು ಕಂಡು, ಇದರಲ್ಲಿ ಕೆಂಪು ವರ್ಣದಿಂದ ಚಿತ್ರಗಳನ್ನು ರಚನೆ ಮಾಡಲಾಗಿದೆ. ಈ ನೆಲೆಯಲ್ಲಿ ಚಿತ್ರಗಳು ಅಸ್ಪಷ್ಟತೆಯಿಂದ ಕೂಡಿದ್ದು, ಇಲ್ಲಿ ಮನುಷ್ಯರನ್ನು ಹೋಲುವಂತೆ ರೇಖೆಯ ವಿನ್ಯಾಸದ ರೀತಿಯಲ್ಲಿ

ಅಂಕು-ಡೊಂಕಿನ ರೇಖೆಗಳನ್ನು ಚಿತ್ರಿಸಲಾಗಿದೆ. ಮತ್ತು ಸಾಂಕೇತಿಕ ಮಾದರಿಯ ಚಿತ್ರಗಳನ್ನು ಪ್ರಮುಖವಾಗಿ ಕಾಣಬಹುದಾಗಿದೆ. ಇಲ್ಲಿ ಚಿತ್ರಗಳು ನೇರವಾಗಿ ಚಿಹ್ನೆಯಂತಹ ನಕ್ಷೆಯ ರೂಪದ ವಿನ್ಯಾಸದಲ್ಲಿ ರಚನೆಗೊಂಡಿರುವುದನ್ನು ಕಾಣಬಹುದು.

**೨. ಮಲದಕಲ್ಲಿನ ಪ್ರಾಗೈತಿಹಾಸಿಕ ಚಿತ್ರಗಳು**

ಗೀರು ಮತ್ತು ಕಟ್ಟು ಚಿತ್ರಗಳ ನೆಲೆಯಾದ ಮಲದಕಲ್ಲು ಒಂದು ಚಿಕ್ಕ ಗ್ರಾಮ. ಇದು ಗಬ್ಬೂರಿನಿಂದ ಸುಮಾರು ೯ ಕಿ.ಮೀ. ದೂರದಲ್ಲಿದೆ. ಊರಿನ ಮಧ್ಯಭಾಗದಲ್ಲಿ ಬೆಟ್ಟವಿದೆ. ಈ ಬೆಟ್ಟದ ಮೇಲೆ ಶ್ರೀ ಪರಮಾನಂದ ಗುಡಿಯ ಹಿಂಬದಿಯ ಕೆಳಗೆ ಪೂರ್ವ ದಿಕ್ಕಿನಲ್ಲಿ ಚಾಚು ಬಂಡೆಯ ಮೇಲೆ ಮತ್ತು ಹೊರಗೆ ಜನರಿಗೆ ತೋರುವಂತೆ ಅಲ್ಲಲ್ಲಿ ಕುಟ್ಟಿದ ಮತ್ತು ಕೊರೆದ ಚಿತ್ರಗಳನ್ನು ಕಾಣುತ್ತೇವೆ. ಈ ನೆಲೆಯಲ್ಲಿ ಅತಿ ಹೆಚ್ಚು ಮತ್ತು ಉತ್ತಮವಾದ ಚಿತ್ರಗಳು ರಚನೆಗೊಂಡ ಪ್ರದೇಶವಾಗಿದೆ. ಎತ್ತಿನ ಚಿತ್ರಗಳು, ಜಿಂಕೆಗಳು, ಮನುಷ್ಯಕಾರದ ಚಿತ್ರಗಳು, ಹುಲಿಯನ್ನು ಹೋಲುವಂತ ಚಿತ್ರಗಳನ್ನು ಕಾಣಬಹುದು. ಈ ನೆಲೆಯ ವಿಶೇಷತೆ ಏನೆಂದರೆ ಬೇರೆ ಬೇರೆ ನೆಲೆಗಳನ್ನು ಹೋಲುವಂತೆ ಇಲ್ಲಿಯೂ ಕೂಡ ಸಾಮಾನ್ಯವಾಗಿ ಎತ್ತಿನ ಚಿತ್ರಗಳ ಆಕಾರವು ಒಂದೇ ರೀತಿಯಲ್ಲಿ ಇದೆ. ಎತ್ತಿನ ದೇಹವು ಉದ್ದನೆಯಾಕಾರದಲ್ಲಿ ಮತ್ತು ಅದರ ಕೋಡುಗಳು 'ವಿ' ಆಕಾರದಲ್ಲಿ ಉದ್ದವಾಗಿವೆ. ರೇಖೆಗಳನ್ನು ಕುಟ್ಟುವ ರೀತಿಯಲ್ಲಿ ರಚಿಸಿದ್ದು ಕಂಡುಬರುತ್ತವೆ. ಎಲ್ಲಾ ನೆಲೆಗಳಲ್ಲಿ ಎತ್ತು, ಗೂಳಿ, ಜಿಂಕೆ, ಹುಲಿ, ನವಿಲು, ಪ್ರಾಣಿ, ಪಕ್ಷಿಗಳ ಚಿತ್ರಗಳನ್ನು ಕಾಣುತ್ತೇವೆ. ಆದರೆ ಈ ನೆಲೆಯಲ್ಲಿ ಅಂದರೆ ಮಲದ ಕಲ್ಲು ಬೆಟ್ಟದಲ್ಲಿ ವಿಶೇಷತೆಯೆಂದರೆ ಜಿಂಕೆ ಮತ್ತು ಹುಲಿಯ ಚಿತ್ರಗಳೊಂದಿಗೆ ಕುದುರೆಯ ಚಿತ್ರ ಮತ್ತು ಊಸರವಳ್ಳಿ ಚಿತ್ರವನ್ನು ಕುಟ್ಟಿದ ಮಾದರಿಯಲ್ಲಿ ರಚನೆ ಮಾಡಿರುವುದನ್ನು ವಿಶೇಷವಾಗಿ ಕಾಣಬಹುದು.

**೩. ಭಿಲ್ಲಮರಾಯನಗುಡ್ಡದ ಪ್ರಾಗೈತಿಹಾಸಿಕ ಚಿತ್ರಗಳು**

ಲಿಂಗಸುಗೂರು ತಾಲೂಕಿನಲ್ಲಿ ಬರುವ ಭಿಲ್ಲಮನಗುಡ್ಡ ಒಂದು ಚಿಕ್ಕ ಗ್ರಾಮಕ್ಕೊಂದು ದೊಡ್ಡ ಕಲ್ಲು ಬಂಡೆಯ ಮೇಲೆ ಕುಟ್ಟಿದ ಚಿತ್ರ ಮತ್ತು ಇತಿಹಾಸ ಕಾಲದ ಲೋಹದ ಉಪಕರಣಗಳನ್ನು ಚಿತ್ರಿಸಿದ್ದಾರೆ. ಕುಟ್ಟಿದ ಚಿತ್ರಗಳಲ್ಲಿ ಹುಲಿಯ ಚಿತ್ರವು ಕುತೂಹಲಕಾರಿ ಮತ್ತು ಗಮನಾರ್ಹ ಚಿತ್ರವಾಗಿದೆ. ಇದರ ಕಾಲುಗಳು ಸ್ವಲ್ಪ ಮುಂಚಾಚಿವೆ ಮತ್ತು ನೇರವಾಗಿವೆ. ದೇಹದ ಮೇಲಿನ ಬಿಡಿ ಪಟ್ಟಿಗಳನ್ನು ಸೂಚಿಸಲು ಒಂದರ ಹಿಂದೆ ಒಂದರಂತೆ ದಪ್ಪ ರೇಖೆಯ ಕೋನಗಳಿವೆ. ಪಟ್ಟಿಕೆಗಳನ್ನು ಸೂಚಿಸಿದ ಕ್ರಮ ನೋಡಿದರೆ ಅದು ಒಂದು ಅಪರೂಪವಾಗಿರುವ ಹುಲಿಯನ್ನು ಸೂಚಿಸುತ್ತದೆ. ಕುಟ್ಟಿದ

ತಂತ್ರದಿಂದ ಕಾಲುಗಳನ್ನು ದೇಹದ ಉಳಿದ ಭಾಗವನ್ನು ಗೀರು ತಂತ್ರಗಳಿಂದ ಚಿತ್ರಿಸಲಾಗಿದೆ.[೩] ಹೀಗೆ ಎರಡು ತಂತ್ರಗಳನ್ನು ಒಂದೇ ಚಿತ್ರದಲ್ಲಿ ಬಳಸಿರುವುದನ್ನು ಚಿತ್ರದಲ್ಲಿ ಕಾಣುತ್ತೇವೆ.

ಹುಲಿಯ ದೇಹದಲ್ಲಿನ ಬಿಳಿ ಪಟ್ಟಿಗಳನ್ನು ಪ್ರಾಚೀನ ಕಲಾವಿದನು ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಂಡು ತನ್ನ ಕೈಚಳಕದಿಂದ ಬಂಡೆಯ ಮೇಲೆ ರಚಿಸಿರುವುದನ್ನು ನೋಡಿದರೆ ಲೋಹ ಅಥವಾ ಕಲ್ಲನ್ನು ಉಪಯೋಗಿಸಿರಬಹುದು.[೪]

ಬಯಲು ಬಂಡೆಯ ಚಿತ್ರಗಳಲ್ಲಿ ಗೂಳಿ, ಎತ್ತು, ಜಿಂಕೆ ಚಿತ್ರಗಳೇ ಹೆಚ್ಚು ಎದುರು ಬದುರು ನಿಂತ ಪ್ರಾಣಿ. ಬಿಲ್ಲಿನಾಕಾರದ ಕೋಡುಗಳಲ್ಲಿ ಒಂದು ಗೂಳಿಯ ಚಿತ್ರವು ನೋಡುವವನ ಕಣ್ಣಿಗೆ ಬೇಗನೆ ಕಾಣಿಸುತ್ತದೆ. ದೊಡ್ಡ ಆಕಾರದಲ್ಲಿ ರೇಖೆಯನ್ನು ಗೀರಿದ್ದಾರೆ. ಎತ್ತಿನ ಕೋಡುಗಳು "ವಿ" ಆಕಾರದಲ್ಲಿವೆ. ಬಲಿಷ್ಟವಾದ ಎತ್ತಿನ ಮುಖವು ಚುಪಾಗಿದ್ದು ಮುಖದಿಂದ ಮುಂದಿನ ಕಾಲಿನವರೆಗೆ ಒಂದೇ ರೇಖೆಯಲ್ಲಿ ಚಿತ್ರಿಸಿದ್ದಾನೆ. ಆಗಿನ ಗೂಳಿಗಳು, ಎತ್ತುಗಳು ನೋಡಲಿಕ್ಕೆ ಬಲಿಷ್ಟವಾಗಿ ಮೈತುಂಬಿಕೊಂಡಿರುವಂತೆ ರಚಿಸಿರುವುದನ್ನು ಚಿತ್ರಗಳ ಮೂಲಕ ಗಮನಿಸಬಹುದು. ಕಲ್ಲಿನ ಮೇಲೆ ಲೋಹದಿಂದ ಅಥವಾ ಚುಪಾದ ಕಲ್ಲಿನಿಂದ ಗೀರಲಾಗಿದೆ. ಭಿಲ್ಲಮರಾಯನಗುಡ್ಡದಲ್ಲಿ ಗವಿವರ್ಣ ಚಿತ್ರಗಳು ಕಂಡುಬಂದಿಲ್ಲಾ. ಕುಟ್ಟಿದ ಚಿತ್ರಗಳು ಮಾತ್ರ ಕಂಡುಬಂದಿವೆ.

**೪. ಆತನೂರಿನ ಪ್ರಾಗೈತಿಹಾಸಿಕ ಚಿತ್ರಗಳು**

ರಾಯಚೂರು ತಾಲೂಕಿನ ಹತ್ತಿರದಲ್ಲಿ ಬರುವ ಆತನೂರು ಒಂದು ಚಿಕ್ಕ ಹಳ್ಳಿ. ಇದರ ಪೂರ್ವದಿಕ್ಕಿಗೆ ತೊಗಲುಗುಡ್ಡವಿದೆ. ಈ ಬೆಟ್ಟದ ಮೇಲೆ ತಾಯಮ್ಮವ್ವನ ಗುಡಿಯ ಹಿಂಬದಿಯಲ್ಲಿ ಕಲ್ಲಾಸರೆಯ ಭಿತ್ತಿಚಿತ್ರವನ್ನು ಕಾಣುತ್ತೇವೆ. ಇಲ್ಲಿನ ಬಂಡೆಯು ಸುಮಾರು ೩ ಅಡಿಯಷ್ಟು ಉದ್ದವಿದ್ದು, ೫ ಅಡಿಯಷ್ಟು ಅಗಲವಿದೆ. ಬಂಡೆಯ ಹೊರಚಾಚು ಕಲ್ಲಾಸರೆಯಲ್ಲಿ ಕಂದು, ಕೆಂಪು ವರ್ಣದಿಂದ ಚಿತ್ರವನ್ನು ಚಿತ್ರಿಸಲಾಗಿದೆ.

ಚಿತ್ರಗಳು ನೆಲದಿಂದ ಸುಮಾರು ೨೦ ಅಡಿಯಷ್ಟು ಮೇಲಿವೆ. ಎರಡು ಮೂರು ಬೃಹಧಾಕಾರದ ಬಂಡೆಯ ಮೇಲೆ ಚಿತ್ರಗಳಿವೆ. ಇಲ್ಲಿಗೆ ಹೋಗಲು ಬಹಳ ಕಷ್ಟಸಾಧ್ಯ ಚಿತ್ರದಲ್ಲಿ ಸೂಕ್ಷ್ಮವಾಗಿ ಗಮನಿಸಿ ನೋಡಿದರೆ ಒಬ್ಬ ಮನುಷ್ಯನು ತ್ರಿಶೂಲಾಕಾರದ ಬಾಣವನ್ನು ಹಿಡಿದು ಬಿರುಸಾಗಿ ಓಡುತ್ತಿರುವ

೦೩. ಡಾ. ಅ. ಸುಂದರ : ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ, ಪು-೪೫

೦೪. ಪುರುಷೋತ್ತಮ ಕೆ.ಎಸ್. : ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಪು-೧೮

ಜಿಂಕೆಯ ಬೆನ್ನುಹತ್ತಿ ಅದಕ್ಕೆ ತಿವಿಯುತ್ತಿರುವುದನ್ನು ನೋಡಬಹುದು. ಮೂಡಿಬಂದಿದೆ. ಮನುಷ್ಯನ ಬಣ್ಣವು ಮಸುಕಾಗಿ ಕಾಣುತ್ತದೆ. ಜಿಂಕೆಯು ಹೆದರಿ ಓಡುತ್ತಿರುವುದು ಸ್ಪಷ್ಟವಾಗಿ ಕಾಣುತ್ತದೆ. ಅದರ ದೇಹದಲ್ಲಿ ಪಟ್ಟೆಯನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಮತ್ತು ದೊಡ್ಡ ಗಾತ್ರದ ದೇಹವು ಹುಲಿಯನ್ನು ಹೋಲುವ ರೀತಿಯಲ್ಲಿ ರೇಖೆಗಳಿಂದ ಮತ್ತು ಅದರ ಮೈಮೇಲೆ ರೇಖೆಗಳ ಮೂಲಕ ಪಟ್ಟೆಗಳನ್ನು ಹೋಲುವಂತೆ ಚಿತ್ರಿಸಲಾಗಿದೆ.

**೫. ಶಿರವಾರದ ಪ್ರಾಗೈತಿಹಾಸಿಕ ಚಿತ್ರಗಳು**

ಈ ನೆಲೆಯು ರಾಯಚೂರಿನಿಂದ ಸುಮಾರು ೩೫ ಕಿ.ಮೀ. ದೂರದಲ್ಲಿದೆ. ನಗರದ ಮಧ್ಯಭಾಗದಲ್ಲಿ ಬಸ್ ನಿಲ್ದಾಣದ ಮುಂಭಾಗದಲ್ಲಿ ನಿಂತು ನೋಡಿದರೆ ಒಂದು ಬೃಹದಾಕಾರದ ಬೆಟ್ಟ ಕಾಣುತ್ತದೆ. ಈ ಬೆಟ್ಟದಲ್ಲಿ ವರ್ಣಚಿತ್ರಗಳ ರಚನೆಗೊಂಡಿದೆ. ಈ ನೆಲೆಯು ಸಿರವಾದ ಕ್ರಿಶ್ಚಿಯನ್ ಶಾಲೆಯ ಹಿಂದಿದೆ. ಬೆಟ್ಟದ ೩ ಗವಿಯ ಮೇಲ್ಛಾವಣೆಯ ಮುಂಭಾಗದಲ್ಲಿ ವರ್ಣಚಿತ್ರಗಳನ್ನು ಬರೆಯಲಾಗಿದೆ. ಬಿಳಿವರ್ಣ ಮತ್ತು ಕಂದು, ಕೆಂಪು ವರ್ಣದಿಂದ ಚಿತ್ರಗಳನ್ನು ರಚಿಸಲಾಗಿದೆ. ಇಲ್ಲಿಯ ೧ನೇ ನೆಲೆಯಲ್ಲಿ ಬಿಲ್ಲುಬಾಣ ಹಿಡಿದಿರುವ ಮನುಷ್ಯನ ಚಿತ್ರವು ಕಂದು, ಕೆಂಪು ವರ್ಣದಿಂದ ಕೂಡಿದೆ. ಎಡ ಮತ್ತು ಬಲಭಾಗದಲ್ಲಿ ಸೂರ್ಯ–ಚಂದ್ರರನ್ನು ಕಂದು, ಕೆಂಪು ವರ್ಣದಿಂದ ರಚಿಸಲಾಗಿದೆ. ಪಕ್ಕದಲ್ಲಿ ಇಬ್ಬರ ಮನುಷ್ಯರ ಚಿತ್ರವನ್ನು ಬಿಳಿಯ ವರ್ಣದಿಂದ ಚಿತ್ರಿಸಿದ್ದಾರೆ. ಮತ್ತು ಕಂದು, ಕೆಂಪು ವರ್ಣದಿಂದ ಮನುಷ್ಯರ ಆಕಾರವನ್ನು ಹೋಲುವಂತೆ ಅಸ್ಪಷ್ಟವಾಗಿ ಕಂಡುಬರುತ್ತದೆ. ಇದೇ ಬೆಟ್ಟದಲ್ಲಿ ಇನ್ನೊಂದು ನೆಲೆಯಿದೆ. ಈ ನೆಲೆಯಲ್ಲಿ ಬಿಳಿಯ ವರ್ಣ ಮತ್ತು ಕಂದು, ಕೆಂಪು ವರ್ಣಚಿತ್ರಗಳನ್ನು ರಚನೆ ಮಾಡಲಾಗಿದೆ. ಗವಿಯ ಮೇಲ್ಛಾವಣಿಯಲ್ಲಿ ಅಲ್ಲಲ್ಲಿ ಮನುಷ್ಯರ ಚಿತ್ರಗಳು ಬಿಳಿವರ್ಣದಿಂದ ಕೂಡಿವೆ. ಕೈಯಲ್ಲಿ "ಗುರಾಣಿ"ಯನ್ನು ಹಿಡಿದು ನಿಂತಿರುವ ಮನುಷ್ಯರನ್ನು ಅಲ್ಲಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಅದರ ಹಿಂದೆ ಕಂದು, ಕೆಂಪು ವರ್ಣದಿಂದ ಚಿತ್ರಗಳು ಕಂಡುಬರುತ್ತವೆ. ಅವುಗಳು ಮುಸುಕಾಗಿ, ಅಸ್ಪಷ್ಟ ರೀತಿಯಲ್ಲಿ ಕಾಣಬಹುದು. ಈ ನೆಲೆಯ ಎರಡು ಗವಿಗಳಲ್ಲಿ ಅಲ್ಪಸ್ವಲ್ಪ ಚಿತ್ರಗಳು ರಚನೆಗೊಂಡಿರುವುದನ್ನು ನಾವು ಕಾಣಬಹುದು.

**೬. ಮಸ್ಕಿಯ ಪ್ರಾಗೈತಿಹಾಸಿಕ ಚಿತ್ರಗಳು**

ಲಿಂಗಸೂಗುರು ತಾಲೂಕಿನ ಮಸ್ಕಿ ಎಂಬಲ್ಲಿರುವ ಗುಡ್ಡ ಪ್ರದೇಶದಲ್ಲಿ ಅನೇಕ ನೆಲೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಭಿತ್ತಿಚಿತ್ರಗಳು ಕಂಡುಬಂದಿವೆ. ಇಲ್ಲಿ ಬಯಲು ಬಂಡೆಯಲ್ಲಿ ರಚಿಸಿರುವ ವರ್ಣರಹಿತವಾದ ಚಿತ್ರಗಳು ಹೆಚ್ಚಾಗಿ ಕಂಡುಬಂದಿವೆ. ಗುಹಾವರ್ಣ ಚಿತ್ರಗಳು ಈ ಪ್ರದೇಶದಲ್ಲಿ

ಇದುವರೆಗೆ ಕಂಡುಬಂದಿಲ್ಲ. ಇಲ್ಲಿ ಬಯಲು ಬಂಡೆಯ ಮೇಲೆ ಕುಟ್ಟುವ ವಿಧಾನದಿಂದ ಮತ್ತು ಕೊರೆಯುವ ವಿಧಾನದಿಂದ ಚಿತ್ರಗಳನ್ನು ರಚಿಸಲಾಗಿದೆ.

ಕೆಲವು ಚಿತ್ರಗಳಲ್ಲಿ ಚಿತ್ರದ ಒಳಭಾಗವನ್ನು ಸಂಪೂರ್ಣವಾಗಿ ಕುಟ್ಟು ಮೈವಳಿಕೆ ಉಂಟಾಮಾಡಿದ್ದಾರೆ. ಮತ್ತೆ ಕೆಲವು ಚಿತ್ರಗಳಲ್ಲಿ ಚಿತ್ರ ಹೊರರೇಖೆಗಳನ್ನು ಮಾತ್ರ ಕುಟ್ಟಿ ಮತ್ತು ಕೊರೆದ ತಗ್ಗು ಮಾಡಿ ಚಿತ್ರ ರಚಿಸಲಾಗಿದೆ. ಇನ್ನು ಕೆಲವು ಚಿತ್ರಗಳಲ್ಲಿ ಹೊರರೇಖೆಗಳನ್ನು ಆಳವಾಗಿ ಕೊರೆಯಲಾಗಿದ್ದರೆ, ಚಿತ್ರದ ಒಳಭಾಗವನ್ನು ಸಂಪೂರ್ಣವಾಗಿ ಕುಟ್ಟಿ, ಚುಕ್ಕೆಯ ವಿನ್ಯಾಸ ಬರುವಂತೆ ಮಾಡಲಾಗಿದೆ. ಈ ರೀತಿ ಬೇರೆ ಬೇರೆ ವಿಧಾನದಲ್ಲಿ ಇಲ್ಲಿ ಚಿತ್ರಗಳನ್ನು ರಚಿಸಲಾಗಿದೆ. ಮಸ್ಕಿ ಪ್ರದೇಶದಲ್ಲಿ ಹುಲಿಗಳ ಚಿತ್ರಗಳು ವಿಶೇಷವಾಗಿ ಕಂಡುಬಂದಿವೆ. ವಿವಿಧ ಗಾತ್ರ ಮತ್ತು ವಿನ್ಯಾಸದ ಸುಮಾರು ಎಂಟು ಹುಲಿಗಳ ಚಿತ್ರಗಳು ಇದುವರೆಗೆ ಪತ್ತೆ ಮಾಡಲಾಗಿದೆ. ಈ ಹುಲಿ ಚಿತ್ರಗಳು ನೈಜವಾದ ಪ್ರಮಾಣ ಬದ್ಧತೆಯನ್ನು ಹೊಂದಿರುವುದಿಲ್ಲ. ಅದಕ್ಕೆ ಬದಲಾಗಿ ಉದ್ದವಾಗಿರುವ ದೇಹ, ಮೈಮೇಲೆ ಪಟ್ಟಿಕೆಗಳು, ಚುಕ್ಕೆಗಳು, ರೇಖೆಗಳು ಮುಂತಾದವುಗಳನ್ನು ರಚಿಸಲಾಗಿದೆ.

ಈ ನೆಲೆಗಳಲ್ಲಿ ಕಂಡುಬರುವ ಮತ್ತೊಂದು ಬಗೆಯ ಆಕರ್ಷಗಳ ಚಿತ್ರ ವಿನ್ಯಾಸಗಳೆಂದರೆ ಗೂಳಿ ಚಿತ್ರಗಳಾಗಿವೆ. ಸಾಲಾಗಿರುವ ಗೂಳಿಗಳು, ಕಾದಾಡುತ್ತಿರುವ ಗೂಳಿಗಳು, ಮೈಮೇಲೆ ಪಟ್ಟಿಕೆಗಳನ್ನು ಹೊಂದಿದ ಗೂಳಿಗಳು, ಮುಂಭಾಗದ ಕೋಡುಗಳು, ಹಿಂಭಾಗದ ಕೋಡುಗಳು, ವೃತ್ತಾಕಾರವಾಗಿರುವ ಮತ್ತು ಅರ್ಧ ವೃತ್ತಾಕಾರವಾಗಿರುವ ಕೋಡುಗಳು, ಬಿಲ್ಲಿನ ವಿನ್ಯಾಸದ ಕೋಡುಗಳು ಇಲ್ಲಿನ ಗೂಳಿಗಳಿಗೆ ಕಂಡುಬರುತ್ತವೆ. ಇಲ್ಲಿಯೂ ಸಹಿತ ಗೂಳಿಯ ನೈಜ ಆಕಾರಕ್ಕಿಂತ ಕಲಾವಿದನ ಕಲ್ಪನೆಯ ಭಾವನಾತ್ಮಕವಾದ ಶೈಲಿಕೃತ ಆಕಾರಗಳು ರಚಿಸಲ್ಪಟ್ಟಿವೆ. ಕೆಲವು ಗೂಳಿಗಳನ್ನು ಕುಟ್ಟುವ ವಿಧಾನದಿಂದ ಇನ್ನು ಕೆಲವು ಗೂಳಿಗಳನ್ನು ಈ ಎರಡು ವಿಧಾನಗಳಿಂದ ರಚನೆ ಮಾಡಲಾಗಿದೆ. ಕೆಲವು ಗೂಲಿಗಳ ಮೇಲೆ ಮನುಷ್ಯರು ಸವಾರಿ ಮಾಡುತ್ತಿದ್ದಾರೆ. ಮಸ್ಕಿ ಭಾಗದಲ್ಲಿ ಕಂಡುಬರುವ ಮತ್ತೊಂದು ಬಗೆಯ ಚಿತ್ರಗಳಲ್ಲಿ ಕುದುರೆಗಳು ಆಕರ್ಷಕವಾಗಿವೆ. ಕೆಲವು ಕಡೆಗಳಲ್ಲಿ ಓಡುತ್ತಿರುವ ಕುದುರೆಗಳು, ಗುಂಪಾಗಿರುವ ಕುದುರೆಗಳು, ಮನುಷ್ಯರ ಜೊತೆಗೆ ತೆರಳುತ್ತಿರುವ ಕುದುರೆಗಳು, ಕುದುರೆಗಳ ಮೇಲೆ ಸವಾರಿ ಮಾಡುತ್ತಿರುವವರು, ಆಯುಧಗಳನ್ನು ಹಿಡಿದು ಕುದುರೆಯ ಮೇಲೆ ಕುಳಿತು ಕಾದಾಟದಲ್ಲಿ ತೊಡಗಿರುವುದು ಕಂಡುಬರುತ್ತದೆ. ಕೆಲವು ಕುದುರೆಗಳನ್ನು ವ್ಯಕ್ತಿಗಳು ಪಳಗಿಸುತ್ತಿದ್ದಾರೆ. ಈ ಎಲ್ಲಾ ಚಿತ್ರಗಳು ಕುಟ್ಟುವ ಮತ್ತು ದೊರೆಯುವ ವಿಧಾನದಿಂದ ರಚನೆಯಾಗಿದೆ.

ಈ ಭಾಗದ ಮತ್ತಷ್ಟು ಕುತೂಹಲಕಾರಿ ಚಿತ್ರಗಳಲ್ಲಿ ಆನೆ ಮತ್ತು ನವಿಲುಗಳು ಕಂಡುಬರುತ್ತವೆ. ಈ ಚಿತ್ರಗಳನ್ನು ಕುಟ್ಟುವ ವಿಧಾನದಿಂದ ರಚನೆ ಮಾಡಲಾಗಿದೆ. ಒಂದು ಬೃಹತ್ತಾದ ಬಂಡೆಯ ಮೇಲೆ ದೊಡ್ಡದಾದ ಆನೆಯ ಚಿತ್ರವಿದ್ದು, ಅದರ ಮೇಲೆ ವ್ಯಕ್ತಿಯೊಬ್ಬನು ಕುಳಿತಿದ್ದಾನೆ. ಈ ಆನೆಯು ನಾಲ್ಕು ಕಾಲುಗಳನ್ನು ಹೊಂದಿದ್ದು ಆಫ್ರಿಕಾ ಪ್ರದೇಶ ಆನೆಯ ಮುಖ ವಿನ್ಯಾಸವನ್ನು ಹೊಂದಿದೆ. ಆನೆಯ ಕೋರೆಗಳು ನೇರವಾಗಿ ಎದುರಿಗೆ ಚಾಚಿಕೊಂಡಿವೆ. ಆನೆಯ ಮೇಲೆ ಕುಳಿತ ವ್ಯಕ್ತಿಯು ಕೈಯಲ್ಲಿ ಹಗ್ಗದಂತಹ ವಸ್ತುವನ್ನು ಹಿಡಿದುಕೊಂಡಿದ್ದಾನೆ. ಚಿತ್ರವು ಅಸ್ಪಷ್ಟವಾಗಿದೆ. ಮತ್ತೊಂದು ಬೃಹತ್ ಬಂಡೆಯಲ್ಲಿ ಇನ್ನೊಂದು ಆನೆಯ ಚಿತ್ರವಿದೆ. ಇಲ್ಲಿಯು ಸಹಿತ ಆನೆಯನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಮೊದಲಿನ ಆನೆಯನ್ನು ಸಂಪೂರ್ಣವಾಗಿ ಕುಟ್ಟುವ ವಿಧಾನದಿಂದ ರಚನೆ ಮಾಡಲಾಗಿದ್ದರೆ, ಎರಡನೆಯ ಬಂಡೆಯ ಮೇಲಿರುವ ಈ ಆನೆಯ ಚಿತ್ರವನ್ನು ರೇಖಾ ವಿನ್ಯಾಸದಲ್ಲಿ ಮಾತ್ರ ಕುಟ್ಟಿ ರಚಿಸಲಾಗಿದೆ. ಒಳಭಾಗವನ್ನು ಹಾಗೆಯೇ ಬಿಡಲಾಗಿದೆ. ಈ ಆನೆಯ ಮುಖವನ್ನು ಸ್ಪಷ್ಟವಾಗಿ ತೋರಿಸಿಲ್ಲ. ಹಣೆಯ ಭಾಗದಿಂದ ಮುಂಗಾಲಿನ ಕೊನೆಯವರಿಗೆ ಒಂದೆ ರೇಖೆಯಲ್ಲಿ ಸೊಂಡಿಲನ್ನು ಚಿತ್ರಿಸಲಾಗಿದೆ. ದಂತಗಳನ್ನು ಬಿಲ್ಲಿನ ಆಕಾರದಲ್ಲಿ ರಚನೆ ಮಾಡಲಾಗಿದೆ. ಬಹುಶಃ ಈ ಆನೆಯ ರಚನೆಯು ಅಪೂರ್ಣಗೊಂಡಂತೆ ಕಾಣುತ್ತದೆ. ಇದಕ್ಕೆ ಮೂರು ಕಾಲುಗಳನ್ನು ಮಾತ್ರ ರಚಿಸಲಾಗಿದೆ. ಆನೆಯ ಮೇಲೆ ಮೂವರ ವ್ಯಕ್ತಿಗಳನ್ನು ಕುಳಿತಂತೆ ಚಿತ್ರಿಸಲಾಗಿದೆ.

ನವಿಲಿನ ಚಿತ್ರಗಳಲ್ಲಿ ಒಂದುಕಡೆಗೆ ರೇಖಾ ವಿನ್ಯಾಸದ ನವಿಲನ್ನು ಚಿತ್ರಿಸಲಾಗಿದ್ದರೆ, ಮತ್ತೆ ಎರಡು ಕಡೆಯ ಕುಟ್ಟುವ ವಿಧಾನದಿಂದ ಸಂಪೂರ್ಣ ಒಳಭಾಗವನ್ನು ತಗ್ಗುಮಾಡಿ ಚಿತ್ರಿಸಲಾಗಿದೆ. ಅದರಲ್ಲಿ ಒಂದು ನವಿಲನ್ನು ಬಲ ಮುಖವಾಗಿ ನೈಜತೆಗೆ ಹತ್ತಿರವಾಗಿರುವಂತೆ ಎತ್ತರವಾದ ನಿಲುವಿನಲ್ಲಿ ಚಿತ್ರಿಸಲಾಗಿದ್ದರೆ, ಮತ್ತೊಂದು ಕಡೆಗೆ ಎಡ ಮುಖದ ನವಿಲನ್ನು ಚಿತ್ರಿಸಿರುವುದು ಕಂಡುಬರುತ್ತದೆ. ಇದು ಅಸ್ಪಷ್ಟವಾಗಿದೆ. ಇಲ್ಲಿಯು ಸಹಿತ ದೇಹದ ಒಳಭಾಗವನ್ನು ಕುಟ್ಟುವ ವಿಧಾನದಿಂದ ಚಿತ್ರಿಸಲಾಗಿದೆ. ಉಳಿದಂತೆ ಮಸ್ಕಿ ಪ್ರದೇಶದಲ್ಲಿ ಜಿಂಕೆಗಳು ಮನುಷ್ಯಾಕಾರಗಳು ಹೆಚ್ಚಾಗಿ ಕಂಡುಬರುತ್ತವೆ.

### ೭. ಬೈಲುಮರ್ಚಡ್‌ನ ಪ್ರಾಗೈತಿಹಾಸಿಕ ಚಿತ್ರಗಳು

ಮಾನ್ವಿ ತಾಲೂಕಿನ ಬಯಲು ಮಾರ್ಚಡ್‌ದಲ್ಲಿ ಪ್ರಾಗೈತಿಹಾಸಿಕ ವರ್ಣಚಿತ್ರಗಳು ಕಂಡುಬಂದಿವೆ. ಬೈಲು ಮರ್ಚಡ ಗ್ರಾಮದಿಂದ ಸಿಂಕೇಶಪುರ ತಾಂಡಕ್ಕೆ ಹೋಗುವ ಮಾರ್ಗದಲ್ಲಿ ಎಡಭಾಗದಲ್ಲಿ ಬಸವೇಶ್ವರ ದೇವಾಸ್ಥಾನವೊಂದಿದೆ. ಇದರ ಹಿಂಬದಿಯ ಬೆಟ್ಟದಲ್ಲಿ ಒಂದು ಬೃಹತ್ ಬಂಡೆ

ಕಂಡುಬರುತ್ತದೆ. ಇದಕ್ಕೆ ಸ್ಥಳೀಯರು ಕಾಟಮಯ್ಯನ ಗುಂಡು ಎಂದು ಕರೆಯುತ್ತಾರೆ. ಈ ಬಂಡೆಯ ಮೇಲೆ ಕೆಂಪುವರ್ಣದ ಚಿತ್ರಗಳು ಕಂಡುಬರುತ್ತವೆ. ಈ ಚಿತ್ರಗಳಲ್ಲಿ ಹೆಚ್ಚಾಗಿ ಕುದುರೆಗಳು, ಗೂಳಿಗಳು, ಕುದುರೆ ಸವಾರರು, ಕಾದಾಟದ ದೃಶ್ಯ ಕಂಡುಬರುತ್ತವೆ. ಇಲ್ಲಿ ಚಿತ್ರಗಳನ್ನು ಸಂಪೂರ್ಣವಾಗಿ ಕೆಂಪು ಬಣ್ಣದ ಲೇಪನದಿಂದ ರಚನೆ ಮಾಡಲಾಗಿದೆ. ಈ ಚಿತ್ರಗಳನ್ನು ಗಮನಿಸಿದಾಗ ಬಹುಶಃ ಇತಿಹಾಸ ಕಾಲದ ಚಿತ್ರಗಳೆಂದು ಭಾಸವಾಗುತ್ತದೆ. ಇಲ್ಲಿ ಗುಂಪು ಗುಂಪಾಗಿರುವ ಕುದುರೆ ಸವಾರರು ಪರಸ್ಪರ ಕಾದಾಡುತ್ತಿದ್ದಾರೆ. ಕೈಯಲ್ಲಿ ವಿವಿಧ ರೀತಿಯ ಆಯುಧಗಳನ್ನು ಹಿಡಿದುಕೊಂಡು ಕಾದಾಟದಲ್ಲಿ ತೊಡಗಿದ್ದಾರೆ. ಕೆಲವು ವ್ಯಕ್ತಿಗಳ ತಲೆಯ ಮೇಲೆ ಇಬ್ಬರು ವ್ಯಕ್ತಿಗಳು ಕುಳಿತಿರುವ ದೃಶ್ಯವು ಗೋಚರಿಸುತ್ತದೆ. ಗೂಳಿಗಳು ಓಡುತ್ತಿರುವುದು, ಕುದುರೆ ಸವಾರರು ಹಿಂಭಾಲಿಸುತ್ತಿರುವುದು ಇದನ್ನು ಗಮನಿಸಿದಾಗ ಗೋವುಗಳ ಅಪಹರಣದಂತಹ ಸಂದರ್ಭಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಪಶುಪಾಲನೆಯು ಮನುಷ್ಯರ ಪ್ರಮುಖ ಉದ್ಯೋಗವಾಗಿದ್ದಾಗ ಇಂತಹ ಘಟನೆಗಳು ಸಾಮಾನ್ಯವಾಗಿ ನಡೆಯುತ್ತಿದ್ದವು. ವೇಗವಾಗಿ ಓಡುತ್ತಿರುವ ಗೂಳಿಗಳು ವಿವಿಧ ವಿನ್ಯಾಸದಲ್ಲಿ ಅತ್ಯಂತ ಆಕರ್ಷಕವಾಗಿ ರಚನೆಗೊಂಡಿವೆ.

ಬೈಲಮರ್ಚಡ್‌ದ ಮತ್ತೊಂದು ನೆಲೆಯಲ್ಲಿ ಬಿಳಿವರ್ಣದ ಚಿತ್ರಗಳಿರುವುದು ವಿಶೇಷವಾಗಿದೆ. ಇಲ್ಲಿ ಹೆಚ್ಚಾಗಿ ಮನುಷ್ಯ ಆಕಾರಗಳನ್ನು ರಚನೆ ಮಾಡಲಾಗಿದೆ. ಕೆಲವು ವ್ಯಕ್ತಿಗಳು ಕಾಲನ್ನು ಅಗಲಿಸಿ ಕೈಗಳನ್ನು ಮೇಲೆ ಮಾಡಿ ಕುಣಿಯುತ್ತಿದ್ದರೆ, ಮತ್ತೆ ಕೆಲವು ವ್ಯಕ್ತಿಗಳು ಕೈಗಳನ್ನು ಅಡ್ಡಡ್ಡಾಗಿ, ನೇರವಾಗಿ ಮಾಡಿಕೊಂಡು ಕುಣಿಯುತ್ತಲಿದ್ದಾರೆ. ಕೆಲವು ವ್ಯಕ್ತಿಗಳಿಗೆ ಬಾಲವನ್ನು ಸೃಷ್ಟಿಸಲಾಗಿದ್ದು ಆಂಜನೆಯನ ಪ್ರತಿರೂಪದಂತೆ ಕಂಡುಬರುತ್ತದೆ. ಇಲ್ಲಿನ ಚಿತ್ರಗಳು ಕಡ್ಡಿ ಮನುಷ್ಯರ ಆಕಾರದಲ್ಲಿ ಕಂಡುಬರುತ್ತವೆ.

### ೮. ಕಲ್ಲೂರಿನ ಪ್ರಾಗೈತಿಹಾಸಿಕ ಚಿತ್ರಗಳು

ಮಾನ್ವಿ ತಾಲೂಕಿನ ಕಲ್ಲೂರು ಎಂಬಲ್ಲಿ ಪ್ರಾಗೈತಿಹಾಸಿಕ ಚಿತ್ರಗಳು ಕಂಡುಬಂದಿವೆ. ಇಲ್ಲಿ ಕುಟ್ಟಿದ ಮತ್ತು ಕೊರೆದ ವಿನ್ಯಾಸದ ಚಿತ್ರಗಳು ಕಂಡುಬಂದಿವೆ. ಇಲ್ಲಿ ಯಾವುದೇ ಬಗೆಯ ವರ್ಣಚಿತ್ರಗಳಿಲ್ಲ. ಕಲ್ಲೂರಿನಿಂದ ನೀರಮಾನ್ವಿಗೆ ಹೋಗುವ ದಾರಿಯಲ್ಲಿ ಎಡಭಾಗದ ಬೆಟ್ಟದಲ್ಲಿ ಬೃಹತ್ ಬಂಡೆಗಳ ಮೇಲೆ ಚಿತ್ರಗಳು ಕಂಡುಬಂದಿವೆ. ಒಂದು ಬೃಹತ್ ಬಂಡೆಯ ಮೇಲೆ ಎರಡು ಎಮ್ಮೆಗಳ ಚಿತ್ರಗಳು ರಚನೆಯಾಗಿವೆ. ಈ ಕಾರಣದಿಂದಾಗಿ ಸ್ಥಳೀಯರು ಈ ಗುಡ್ಡವನ್ನು "ಎಮ್ಮೆಗುಡ್ಡ" ಎಂದು ಕರೆಯುತ್ತಾರೆ. ಇಲ್ಲಿ ಒಟ್ಟು ಮೂರು ಬೃಹತ್ ಗಾತ್ರದ ಕಾಡೆಮ್ಮೆಯ ಚಿತ್ರಗಳಿವೆ. ಇವುಗಳನ್ನು ಕುಟ್ಟುವ ವಿಧಾನದಿಂದ ರಚನೆ ಮಾಡಲಾಗಿದೆ. ಒಂದು ಎಮ್ಮೆಯ ಚಿತ್ರವನ್ನು ಹೊರ ರೇಖೆಗಳನ್ನು ಮಾತ್ರ ಸೃಷ್ಟಿಸಲಾಗಿದ್ದರೆ,

ಇನ್ನೆರಡು ಚಿತ್ರಗಳಲ್ಲಿ ಎಮೆಯ ಒಳಭಾಗವನ್ನು ಸಂಪೂರ್ಣವಾಗಿ ಎಮ್ಮೆಗಳ ಕೋಡುಗಳನ್ನು ಅರ್ಧ ವೃತ್ತಾರಾರವಾಗಿ ರಚಿಸಿರುವುದು ಅತ್ಯಂತ ಆಕರ್ಷಕವಾಗಿದೆ. ಈ ಚಿತ್ರಗಳ ಬಗ್ಗೆ ಅ ಸುಂದರ ಅವರು ಹೆಚ್ಚಿನ ವವರಣೆಯನ್ನು ನೀಡಿದ್ದಾರೆ. ಇದರಲ್ಲಿ ಇವುಗಳ ತಂತ್ರಗಾರಿಕೆ, ಅಳತೆ, ಪ್ರಮಾಣ, ವಿನ್ಯಾಸ ಇವುಗಳನ್ನು ಕುರಿತು ಚರ್ಚಿಸಿದ್ದಾರೆ.

ಇದಲ್ಲದೆ ಇಲ್ಲಿನ ಮತ್ತೊಂದು ಬಂಡೆಯಲ್ಲಿ ವಿವಿಧ ಆಕಾರ ಮತ್ತು ವಿನ್ಯಾಸದ ಗೂಳಿಯ ಚಿತ್ರಗಳು ರಚನೆಯಾಗಿವೆ. ಇಲ್ಲಿಯು ಸಹಿತ ಕೆಲವು ಚಿತ್ರಗಳಲ್ಲಿ ಹೊರರೇಖೆಗಳನ್ನು ಮಾತ್ರ ರಚನೆ ಮಾಡಿದ್ದಾರೆ. ಮತ್ತೆ ಕೆಲವು ಚಿತ್ರಗಳಲ್ಲಿ ದೇಹದ ಒಳಭಾಗವನ್ನು ಕುಟ್ಟುವ ವಿಧಾನದಿಂದ ಪೂರ್ಣಗೊಳಿಸಲಾಗಿದೆ. ಗೂಳಿಗಳ ದೇಹ ವಿನ್ಯಾಸವು ನೈಜವಾಗಿರದೆ ಅತ್ಯಂತ ಉದ್ದವಾಗಿವೆ. ಕೆಲವು ಗೂಳಿಗಳ ಬೆನ್ನ ಮೇಲಿನ ಇಣಿಯ ಭಾಗವನ್ನು ಅತಿರೇಖಿಸಿ ತೋರಿಸಿದ್ದರೆ, ಮತ್ತೆ ಕೆಲವು ಚಿತ್ರಗಳಲ್ಲಿ ಅತ್ಯಂತ ಚಿಕ್ಕದಾಗಿ ತೋರಿಸಲಾಗಿದೆ.

**೯. ಮಾನ್ವಿಯ ಪ್ರಾಗೈತಿಹಾಸಿಕ ಚಿತ್ರಗಳು**

ಮಾನ್ವಿಯು ರಾಯಚೂರು ಜಿಲ್ಲೆಯ ತಾಲೂಕು ಕೇಂದ್ರವಾಗಿದ್ದು ಈ ಊರಿನ ಪಶ್ಚಿಮ ದಿಕ್ಕಿಗೆ ಇರುವ ಕಲ್ಲಿನ ಬೆಟ್ಟಗಳಲ್ಲಿ ವರ್ಣಚಿತ್ರಗಳು ಕಂಡುಬಂದಿವೆ. ಬಂಡೆಯ ಮೇಲೆ ಬಿಳಿ ಹಿನ್ನೆಲೆಯನ್ನು ಲೇಪನಮಾಡಿ ಅದರ ಮೇಲೆ ಕೆಂಪು ವರ್ಣದಿಂದ ಚಿತ್ರಗಳನ್ನು ರಚಿಸಲಾಗಿದೆ. ಇವು ಕೂಡ ಬೈಲು ಮರ್ಚಡ್ ಚಿತ್ರಗಳಂತೆ ಇತಿಹಾಸ ಕಾಲಕ್ಕೆ ಸಂಬಂಧಪಟ್ಟವುಗಳಾಗಿದ್ದು, ಬಯಲು ಬಂಡೆಗಳ ಮೇಲೆ ರಚನೆಯಾಗಿರುವುದರಿಂದ ಮತ್ತು ರಚನಾ ವಿಧಾನವು ಪ್ರಾಗೈತಿಹಾಸಿಕ ಕಾಲದ ಚಿತ್ರ ರಚನೆಯಂತೆ ಕಂಡುಬರುವುದರಿಂದ ಅವುಗಳನ್ನು ಈ ಗುಂಪಿನಲ್ಲಿ ವಿವರಿಸಲಾಗಿದೆ.

ಇಲ್ಲಿನ ಚಿತ್ರಗಳು ಸಾಲಾಗಿ ಪಟ್ಟಿಕೆಗಳಲ್ಲಿ ರಚನೆಗೊಂಡಿವೆ. ಮೇಲೆ ಮತ್ತು ಕೆಳಗೆ ಹೀಗೆ ಒಟ್ಟು ನಾಲ್ಕು ಪಟ್ಟಿಕೆಗಳು ಚಿತ್ರಗಳಿಂದ ತುಂಬಿಕೊಂಡಿವೆ. ಈ ಚಿತ್ರ ಪಟ್ಟಿಕೆಗಳು ಬಂಡಯನ್ನು ಸುತ್ತುವರೆದಂತೆ ಕಂಡುಬರುತ್ತವೆ. ಆದರೆ ಕೆಲವೆ ಭಾಗದಲ್ಲಿ ಮಾತ್ರ ಅಲ್ಪಸ್ವಲ್ಪ ಚಿತ್ರಗಳು ಉಳಿದುಕೊಂಡಿವೆ. ಉದ್ದವಾದ ಪಟ್ಟಿಕೆಗಳಲ್ಲಿ ವಾದ್ಯಗಾರರು ಮೇರವಣಿಗೆಯ ದೃಶ್ಯ ಸಾಲಾಗಿ ಕುಣಿಯುತ್ತಿರುವವರು. ರಾಜ ಪೋಕಾಶಿನ ವ್ಯಕ್ತಿಗಳು ಸೈನಿಕರಂತೆ ಕಾಣುವ ವ್ಯಕ್ತಿಗಳು ತಲೆಯ ಮೇಲೆ ವಿವಿಧ ರೀತಿಯ ಶಿರಸ್ತ್ರಗಳನ್ನು ಧರಿಸಿರುವ ಸ್ತ್ರೀ–ಪುರುಷರು ಕಂಡುಬರುತ್ತಾರೆ. ಕೆಲವು ವ್ಯಕ್ತಿಗಳು ಯಾವುದೋ ಒಂದು ನೃತ್ಯಕ್ಕೆ ಹೆಜ್ಜೆ ಹಾಕುತ್ತಿರುವಂತೆ ಕಂಡುಬರುತ್ತದೆ. ಒಂದೊಂದು ಪಟ್ಟಿಕೆಗಳಲ್ಲಿರುವ ಚಿತ್ರಗಳು ಒಂದೊಂದು ರೀತಿಯಾಗಿವೆ. ಪಟ್ಟಿಕೆಗಳ

ಅಂಚಿನಲ್ಲಿ ವಜ್ರಾಕೃತಿಯ ನಕ್ಷೆಯನ್ನು ರಚನೆ ಮಾಡಲಾಗಿದೆ. ಇಲ್ಲಿನ ವೇಷಭೂಷಣಗಳನ್ನು ಗಮನಿಸಿದಾಗ ಈ ಚಿತ್ರಗಳು ಅರಸು ಮನೆತನಗಳ ಕಾಲಘಟ್ಟವನ್ನು ಸೂಚಿಸುವಂತೆ ಕಂಡುಬರುತ್ತವೆ. ಮಧ್ಯದ ಪಟ್ಟಿಕೆಯಲ್ಲಿ ಈಶ್ವರ ಲಿಂಗದಂತೆ ಕಾಣುವ ಆಕಾರವಿದೆ. ಕೆಲವು ವ್ಯಕ್ತಿಗಳು ಅದರ ಎದುರು ಭಾಗದಲ್ಲಿ ಪೂಜೆಯಲ್ಲಿ ತೊಡಗಿದ್ದಾರೆ. ಲಿಂಗದ ಎದುರು ಭಾಗದಲ್ಲಿ ಕಂಬದ ಹಾಗೆ ಇರುವ ಆಕಾರವು ದೀಪಸ್ತಂಭವಾಗಿರುವ ಸಾಧ್ಯತೆ ಇದೆ.

ಕೆಳಗಿನ ಪಟ್ಟಿಕೆಗಳಲ್ಲಿ ಕಂಡುಬರುವ ವ್ಯಕ್ತಿಗಳು ವಿಶೇಷವಾಗಿ ಮೊಗಲ್ ಶೈಲಿಯ ವೇಷಭೂಷಣಗಳನ್ನು ಧರಿಸಿದ್ದಾರೆ. ತಲೆಯ ಮೇಲಿನ ಶೀರಸ್ತ್ರಣ ಉದ್ದನೆಯ ನಿಲುವಂಗಿ, ಅಧೋವಸ್ತ್ರ ಇವುಗಳೆಲ್ಲ ಪರ್ಶಿಯನ್ ಪ್ರಭಾವದಿಂದ ಕೂಡಿದೆ. ತೀರ ಮೇಲಿನ ಪಟ್ಟಿಕೆಯಲ್ಲಿ ಇರುವ ಚಿತ್ರಗಳು ಸಹಿತ ಮೋಘಲ್ ವೇಷಭೂಷಣಗಳನ್ನು ಒಳಗೊಂಡಿದೆ. ಇಲ್ಲಿ ಒಬ್ಬ ವ್ಯಕ್ತಿ ಧರಿಸಿರುವ ಶಿರಸ್ತ್ರಣವು ಮೋಘಲ್ ದೊರೆ ಜಾಹಂಗೀರನ ವೇಷಭೂಷಣ ನೆನಪಿಸುತ್ತದೆ. ಈ ಹಿನ್ನೆಲೆಯಲ್ಲಿ ಇವುಗಳ ಕಾಲಘಟ್ಟವನ್ನು ಮತ್ತೊಮ್ಮೆ ನಿರ್ಧರಿಸುವ ಅವಶ್ಯಕತೆ ಇದೆ. ಆದರೆ ಈಗಾಗಲೆ ಅ. ಸುಂದರ ಅವರು ಇವುಗಳನ್ನು ವಿಜಯನಗರದ ಕಾಲದ ಚಿತ್ರಗಳೆಂದು ಹೇಳಿದ್ದಾರೆ. ನಂತರದಲ್ಲಿ ಕೆಲವರು ಈ ಅಭಿಪ್ರಾಯಗಳನ್ನು ಒಪ್ಪಿಕೊಂಡಿದ್ದಾರೆ.

ಇದಲ್ಲದೆ ಮಾನ್ವಿಯಲ್ಲಿ ಶಿವಲಿಂಗದ ಎದುರು ಕುದುರೆ, ಎತ್ತುಗಳು, ಗೂಳಿಗಳು ಇನ್ನಿತರ ಪ್ರಾಣಿಗಳು ಪಲ್ಲಕ್ಕಿ ಮೇರವಣಿಗೆ, ವಾದ್ಯನುಡಿಸುತ್ತಿರವವರು, ಹೂವುಗಳನ್ನು ಹಿಡಿದುಕೊಂಡವರು. ಹೀಗೆ ಅನೇಕ ಚಿತ್ರಗಳಿವೆ. ಇದಲ್ಲದೇ ಪಟ್ಟಿಕೆಗಳ ಹೊರಭಾಗದಲ್ಲಿ ತಂತಿಯ ಜಾಳಿಗೆಯಂತೆ ಚಿತ್ರ ವಿನ್ಯಾಸವನ್ನು ರಚಿಸಲಾಗಿದೆ. ಹೆಚ್ಚಿನಗಳೆಲ್ಲ ಕೆಂಪು ವರ್ಣದಿಂದ ರಚನೆಯಾಗಿವೆ.

### ೧೦. ಪಿಕ್ಲಿಹಾಳದ ಪ್ರಾಗೈತಿಹಾಸಿಕ ಚಿತ್ರಗಳು

ಲಿಂಗಸೂರು ತಾಲೂಕಿನ ಪಿಕ್ಲಿಹಾಳದಲ್ಲಿ ಪ್ರಾಗೈತಿಹಾಸಿಕ ಚಿತ್ರಗಳು ಕಂಡುಬಂದಿವೆ. ಇಲ್ಲಿ ಅನೇಕ ನೆಲೆಗಳಲ್ಲಿ ಚಿತ್ರಗಳಿವೆ. ಕುಟ್ಟಿ ಕೊರೆದ ಚಿತ್ರಗಳು ಮತ್ತು ಗುಹವರ್ಣಚಿತ್ರಗಳು ಕಂಡುಬಂದಿರುವುದು ಇಲ್ಲಿನ ವಿಶೇಷವಾಗಿದೆ. ಈ ಚಿತ್ರಗಳನ್ನು ಮೊದಲಬಾರಿಗೆ ಇಂಗ್ಲೇಂಡ್ ದೇಶದ ಡಾ. ಅಲ್ಸ್‌ನ್ ದಂಪತಿಗಳು ಪತ್ತೆ ಮಾಡಿದರು. ನಂತರ ಡಾ. ಅ. ಸುಂದರ ಹಾಗೂ ಇತರ ಅನೇಕ ಜನರು ಇವುಗಳ ಕುರಿತು ಅಧ್ಯಯನ ಮಾಡಿದ್ದಾರೆ. ಅವೆಲ್ಲವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಕ್ಷೇತ್ರಕಾರ್ಯದ ಸ್ವಂತ ಅನುಭವದಿಂದ ಪಿಕ್ಲಿಗಾಳದ ಚಿತ್ರಗಳ ಬಗ್ಗೆ ಕೆಳಗಿನಂತೆ ಸಂಕ್ಷಿಪ್ತವಾಗಿ ವಿವರಿಸಬಹುದು. ಇಲ್ಲಿನ

ಒಂದು ಬೃಹತ್ ಬಂಡೆಯ ಮೇಲೆ ಕುಟ್ಟಿದ ಚಿತ್ರಗಳು ಕಂಡುಬಂದಿವೆ. ಇಲ್ಲಿನ ಬೃಹತ್ ಬಂಡೆಯ ಮೇಲೆ ಎಂಟಕ್ಕಿಂತ ಅಧಿಕ ಗೂಳಿ ಚಿತ್ರಗಳನ್ನು ರಚಿಸಲಾಗಿದೆ. ಎಲ್ಲಾ ಗೂಳಿಗಳ ದೇಹದ ಒಳಭಾಗಗಳನ್ನು ಕುಟ್ಟುವ ಮೂಲಕ ತಗ್ಗು ಮಾಡಿದ್ದಾರೆ. ಇಲ್ಲಿ ಯಾವುದೇ ರೀತಿಯ ರೇಖಾವಿನ್ಯಾಸದ ಚಿತ್ರಗಳು ಕಂಡುಬರುವುದಿಲ್ಲ. ಎಲ್ಲಾ ಚಿತ್ರಗಳನ್ನು ಅಗಲವಾಗಿ ಕುಟ್ಟುವ ವಿಧಾನದಿಂದ ರಚನೆ ಮಾಡಿದ್ದಾರೆ. ಇಲ್ಲಿನ ಗೂಳಿಯ ಚಿತ್ರಗಳು ಒಂದಕ್ಕಿಂತ ಒಂದು ಭಿನ್ನವಾಗಿವೆ. ತೆಳ್ಳನೆಯ ದೇಹ, ಗಿಡ್ಡದಾದ ಕಾಲುಗಳು, ಬಿಲ್ಲಿನಂತೆ ಬಾಗಿರುವ ಕೋಡುಗಳು ಕಂಡುಬರುತ್ತವೆ. ಕೆಲವು ಗೂಳಿಗಳ ಕೋಡುಗಳನ್ನು ಬಿಲ್ಲಿನಂತೆ ಬಾಗಿಸಿದ್ದಾರೆ. ಮತ್ತು ಕೆಲವು ಕೋಡುಗಳನ್ನು ಅದರ ವಿರುದ್ಧ ದಿಕ್ಕಿನಲ್ಲಿ ಬಾಗಿರುವಂತೆ ರಚಿಸಲಾಗಿದೆ. ಕೆಲವು ಗೂಳಿಗಳ ಕೋಡು ಮತ್ತು ಬಾಲದ ತುದಿಗಳಲ್ಲಿ ಸೂರ್ಯನ ಕಿರಣದಂತೆ ವಿನ್ಯಾಸ ಮಾಡಲಾಗಿದೆ.

ಈ ಚಿತ್ರಗಳು ಗುಂಪಾಗಿದ್ದು ಬೇರೆ ಬೇರೆ ಭಂಗಿಗಳನ್ನು ಪ್ರತಿಬಿಂಬಿಸುತ್ತವೆ. ಮತ್ತೊಂದು ನೆಲೆಯಲ್ಲಿ ಒಂದು ಕಲ್ಲಾಶ್ರಯ ಕೆಳಭಾಗದಲ್ಲಿ ಗುಂಪಾಗಿ ಅನೇಕ ಚಿತ್ರಗಳು ರಚನೆಗೊಂಡಿವೆ. ಕೆಂಪು ಬಣ್ಣದಿಂದ ರಚಿಸಲ್ಪಟ್ಟ ಈ ಚಿತ್ರಗಳು ವೈವಿಧ್ಯತೆಯಿಂದ ಕೂಡಿವೆ. ಕೆಲವು ಚಿತ್ರಗಳು ರೇಖಾವಿನ್ಯಾಸದಲ್ಲಿದ್ದರೆ, ಮತ್ತೆ ಕೆಲವು ಚಿತ್ರಗಳು ಚಪ್ಪಟೆಯಾಗಿ ಬಣ್ಣ ಲೇಪಿಸಲಾಗಿದೆ. ಅಂದರೆ ಚಿತ್ರಗಳ ಒಳಭಾಗವನ್ನು ಬಣ್ಣದಿಂದ ತುಂಬಿಸಲಾಗಿದೆ. ಇಲ್ಲಿರುವ ಕೆಲವು ವಿಷಯಗಳಲ್ಲಿ ಉಡದಂತಹ ಪ್ರಾಣಿಗಳು, ಗೂಳಿ, ಹಂದಿ, ಮನುಷ್ಯಾಕಾರಗಳು, ಹಾವುಗಳು, ಹಲ್ಲಿಯಂತಹ ಪ್ರಾಣಿ, ಮಂಡಲ ಚಿತ್ರಗಳು, ನಕ್ಷೆವಿನ್ಯಾಸಗಳು ಕಂಡುಬರುತ್ತವೆ.

ಪಿಕ್ಲಿಹಾಳ ಮತ್ತೊಂದು ಗುಡ್ಡದಲ್ಲಿ ಬಂಡೆಯ ಕೆಳಭಾಗದಲ್ಲಿ ಕೆಲವು ಕೆಂಪು ಬಣ್ಣದ ಚಿತ್ರಗಳು ಕಂಡುಬಂದಿವೆ. ಇಲ್ಲಿಯು ಸಹಿತ ಕೆಲವು ಚಿತ್ರಗಳನ್ನು ರೇಖಾವಿನ್ಯಾಸದಲ್ಲಿ ರಚಿಸಲಾಗಿದ್ದರೆ, ಮತ್ತೆ ಕೆಲವು ಚಿತ್ರಗಳನ್ನು ಚಪ್ಪಟೆಯಾಗಿ ಬಣ್ಣ ಲೇಪಿಸಿ ಚಿತ್ರದ ಒಳಭಾಗವನ್ನು ತುಂಬಿಸಲಾಗಿದೆ. ಇಲ್ಲಿನ ವಿಷಯಗಳಲ್ಲಿ ಮನುಷ್ಯಾಕಾರಗಳು, ಗೂಳಿಗಳು, ಕುದುರೆಗಳು, ತೋಳ ಮುಂತಾದ ಚಿತ್ರಗಳು ಕಂಡುಬಂದಿವೆ. ಇಲ್ಲಿನ ವಿಶೇಷ ಚಿತ್ರಗಳಲ್ಲಿ ಕುದುರೆಯೊಂದಿಗೆ ಇರುವ ಮನುಷ್ಯನ ಚಿತ್ರವು ಕುತೂಹಲಕರವಾಗಿದೆ. ಮನುಷ್ಯನ ಆಕಾರವನ್ನು ದೊಡ್ಡದಾಗಿ ರಚಿಸಿದ್ದರೆ, ಅವನ ಪಕ್ಕದಲ್ಲಿ ಕುದುರೆಯನ್ನು ಚಿಕ್ಕದಾಗಿ ತೋರಿಸಲಾಗಿದೆ. ಈ ಎರಡು ಚಿತ್ರಗಳಲ್ಲಿ ಒಳಭಾಗವನ್ನು ಬಣ್ಣದಿಂದ ತುಂಬಿಸಲಾಗಿದೆ. ಮನುಷ್ಯ ಚಿತ್ರವು ಕುತೂಹಲಕರವಾಗಿದ್ದು, ಗುಪ್ತಾಂಗವನ್ನು ಚಿತ್ರಿಸಿರುವುದು ಕಂಡುಬರುತ್ತದೆ.

ಮತ್ತೊಂದು ಕಡೆಗೆ ಒಂದು ದೊಡ್ಡದಾದ ಗೂಳಿಯ ಚಿತ್ರವನ್ನು ರಚಿಸಲಾಗಿದೆ. ಚಿಕ್ಕದಾದ ಮುಖ, ದೊಡ್ಡ ದೇಹ, ಕವಲಿನಂತೆ ಇರುವ ಕೋಡುಗಳು ಮೇಲಕ್ಕೆತ್ತಿದ ಬಾಲ ಇಲ್ಲಿ ಕಂಡುಬರುತ್ತದೆ. ಚಿತ್ರಗಳ ಒಳಭಾಗವನ್ನು ಬಣ್ಣದಿಂದ ತುಂಬಲಾಗಿದೆ. ಯಾವುದೇ ಅಂಗಗಳನ್ನು ಬಿಡಿ ಬಿಡಿಯಾಗಿ ತೋರಿಸಿಲ್ಲ. ಈ ಗೂಳಿಯ ಮೇಲ್ಭಾಗದಲ್ಲಿ ಅದೇ ಬಂಡೆಯ ಮೇಲೆ ಎದುರು ಬದುರಾಗಿರುವ ಎರಡು ಗೂಳಿಗಳನ್ನು ಚಿತ್ರಸಲಾಗಿದೆ. ಇವು ರೇಖಾವಿನ್ಯಾಸದಲ್ಲಿವೆ. ಅದರಂತೆ ಒಂದರ ಹಿಂದೆ ಒಂದು ರೇಖಾವಿನ್ಯಾಸದ ಗೂಳಿಗಳು ಇಲ್ಲಿ ರಚನೆಯಾಗಿವೆ.

ಮತ್ತೊಂದು ಕಡೆಗೆ ಪ್ರತ್ಯೇಕವಾಗಿರುವ ಗೂಳಿಯನ್ನು ಮತ್ತೆ ಗುರುತಿಸಲಾಗದ ಆಕಾರವೊಂದನ್ನು ಕೆಂಪು ಬಣ್ಣದಲ್ಲಿ ಚಿತ್ರಿಸಿದ್ದಾರೆ. ಇದೇ ಬಂಡೆಯ ಮತ್ತೊಂದು ಕಡೆಗೆ ಸ್ವಲ್ಪ ಮೇಲ್ಭಾಗದಲ್ಲಿ ಕಾದಾಟದ ದೃಶ್ಯವಿದೆ. ಇದರಲ್ಲಿ ಒಬ್ಬ ವ್ಯಕ್ತಿಯು ಬಿಲ್ಲು-ಬಾಣಗಳಿಂದ ದಾಳಿ ಮಾಡುತ್ತಿದ್ದರೆ, ಎದುರಿಗಿರುವ ವ್ಯಕ್ತಿಯು ದೊಡ್ಡದಾದ ಬಡಿಗೆಯನ್ನು ಹಿಡಿದುಕೊಂಡು ಕಾದಾಡುತ್ತಿದ್ದಾನೆ. ಇವೆರಡು ಚಿತ್ರಗಳ ಒಳಭಾಗವನ್ನು ಬಣ್ಣದಿಂದ ತುಂಬಿಸಲಾಗಿದೆ. ಹಿನ್ನೆಲೆಯಲ್ಲಿ ರೇಖಾವಿನ್ಯಾಸದ ಕೆಲವು ವ್ಯಕ್ತಿಚಿತ್ರಗಳು ಮುಸುಕಾಗಿ ಕಂಡುಬರುತ್ತವೆ. ಇನ್ನೊಂದು ಬಂಡೆಯ ಕೆಳಭಾಗದಲ್ಲಿ ಸಾಲಾಗಿರುವ, ಎದುರು ಬದರಾಗಿರುವ ಮತ್ತು ವಿವಿಧ ವಿನ್ಯಾಸಗಳಲ್ಲಿರುವ ಅನೇಕ ಗೂಳಿಗಳನ್ನು ಚಿತ್ರಿಸಲಾಗಿದೆ. ಇವೆಲ್ಲವನ್ನು ಒಳಭಾಗದಲ್ಲಿ ಬಣ್ಣ ತುಂಬಿ ರಚಿಸಲಾಗಿದೆ.

ಪಿಕ್ಲಿಹಾಳದ ಮತ್ತೊಂದು ಗುಡ್ಡದಲ್ಲಿ ಬಂಡೆಯ ತಳಭಾಗದಲ್ಲಿ ಕೆಂಪುವರ್ಣದ ಚಿತ್ರಗಳನ್ನು ರಚಿಸಲಾಗಿದೆ. ಇಲ್ಲಿ ರೇಖಾವಿನ್ಯಾಸದ ಚಿತ್ರಗಳು ಮತ್ತು ಒಳಭಾಗದಲ್ಲಿ ಬಣ್ಣ ತುಂಬಿದ ಚಿತ್ರಗಳು ಕಂಡುಬರುತ್ತವೆ. ಗೂಳಿಗಳು ಸಾಲಾಗಿ ಕೈಕೈ ಹಿಡಿದು ನಿಂತುಕೊಂಡ ಮನುಷ್ಯ ಚಿತ್ರಗಳು ಉಳಿಮೆ ಮಾಡುತ್ತಿರುವ ಚಿತ್ರಗಳು ಕಂಡುಬಂದಿವೆ.

ಕೆಳಭಾಗದಲ್ಲಿ ಇರುವ ಕೆಲವು ಗೂಳಿ ಚಿತ್ರಗಳು ಆಕರ್ಷಕವಾಗಿವೆ. ಇಲ್ಲಿನ ಕೆಲವು ಗೂಳಿಗಳ ಬಾಲಗಳನ್ನು ಹಿಂದಿನ ನೆಲೆಯಂತೆ ಸೂರ್ಯ ಕಿರಣದ ತುದಿಯಂತೆ ಚಿತ್ರಿಸಲಾಗಿದೆ. ಮುಖವನ್ನು ಮುಂದೆ ಚಾಚಿದಂತೆ ಎರಡು ರೇಖೆಗಳಿಂದ ತೋರಿಸಲಾಗಿದೆ. ಇದು ಆನೆಯ ದಂತದಂತೆ ಕಂಡುಬರುತ್ತವೆ.

ಇಲ್ಲಿನ ಮತ್ತೊಂದು ಬೆಟ್ಟದಲ್ಲಿ ಕಲ್ಲಾಶ್ರಯ ಕೆಳಭಾಗದಲ್ಲಿ ಕೆಂಪು ಬಣ್ಣದ ಕೆಲವು ಚಿತ್ರಗಳು ಕಂಡುಬಂದಿವೆ. ಇಲ್ಲಿನ ಚಿತ್ರಗಳನ್ನು ಒಳಭಾಗದಲ್ಲಿ ಬಣ್ಣ ತುಂಬುವ ಮೂಲಕ ರಚನೆ ಮಾಡಲಾಗಿದೆ. ಇಲ್ಲಿ ಹೆಚ್ಚಾಗಿ ಗೂಳಿಯ ಚಿತ್ರಗಳನ್ನು ರಚಿಸಲಾಗಿದೆ. ಸಾಲಾಗಿರುವ ಗೂಳಿಗಳು, ಆಕಳು ಮತ್ತು ಕಕಳಿನ

ಹಾಲು ಕುಡಿಯುತ್ತಿರುವ ಕರು, ಕೆಲವು ಮನುಷ್ಯ ಆಕೃತಿಗಳು ಸಾಂಕೇತಿಕ ಮಂಡಲಗಳು ಇಲ್ಲಿ ಕಂಡುಬಂದಿವೆ. ಇದೇ ಪ್ರದೇಶದಲ್ಲಿ ಗಣಿಗಾರಿಕೆ ನಡೆಯುತ್ತಿದ್ದು ಹೆಚ್ಚಿನ ಚಿತ್ರಗಳು ನಾಶವಾಗಿವೆ. ಸದ್ಯ ಉಳಿದುಕೊಂಡಿರುವ ಈ ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಪಾಚೀನ ಕಾಲದ ಮಾನವನ ದೃಶ್ಯಾಭಿವ್ಯಕ್ತಿಯ ಸೃಜನಶೀಲ ಬದುಕನ್ನು ಪ್ರತಿನಿಧಿಸುತ್ತವೆ.



೩. ಡಾ. ಅ. ಸುಂದರ, ಕರ್ನಾಟಕ ಪ್ರಾಗೈತಿಹಾಸಿಕ ಚಿತ್ರಕಲೆ, ಪುಟ-೪೩

೪. ಪುರುಷೋತ್ತಮ ಕೆ.ಎಸ್., ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಪುಟ-೨೦

## ಅತ್ತನೂರು ತೊಗಲು ಗುಡ್ಡ



ಶ್ರೀ ತಾಯಮ್ಮವ್ವ ದೇವಸ್ಥಾನದ ಹಿಂಬದಿಯ ವರ್ಣಚಿತ್ರದ ನೆಲೆ



ಬೃಹತ್ ಬಂಡೆಯ ಮೇಲೆ ಆದಿಮಾನವರ ವರ್ಣಚಿತ್ರಗಳು

ಬೈಲ್‌ಮರ್ಚೆಡ್



ಪ್ರಾಗೈತಿಹಾಸಿಕ ಚಿತ್ರಗಳಿರುವ ಮೂರನೆಯ ನೆಲೆ



ಮನುಷ್ಯನ ಚಿತ್ರ



ಪ್ರಾಗೈತಿಹಾಸಿಕ ಚಿತ್ರಗಳಿರುವ ಎರಡನೆಯ ನೆಲೆ



ಬಿಳಿ ವರ್ಣದ ಮನುಷ್ಯಾಕೃತಿ ಚಿತ್ರಗಳು



ಪ್ರಾಗೈತಿಹಾಸಿಕ ಚಿತ್ರಗಳಿರುವ ನೆಲೆ, ಕಾಟಮಯ್ಯನ ಗುಂಡು, ಬೈಲುಮಾರ್ಚೆಡ್‌ನ



ಪ್ರಾಗೈತಿಹಾಸಿಕ ಚಿತ್ರಗಳು ನಾಶವಾಗಿರುವ ದೃಶ್ಯ, ಕಾಟಮಯ್ಯನ ಗುಂಡು, ಬೈಲುಮಾರ್ಚೆಡ್‌ನ



ಯುದ್ಧದ ಸನ್ನಿವೇಶ, ಕಾಟಮಯ್ಯನ ಗುಂಡು, ಬೈಲುಮರ್ಚೆಡ್



ಯುದ್ಧದ ಸನ್ನಿವೇಶ, ಕಾಟಮಯ್ಯನ ಗುಂಡು, ಬೈಲುಮರ್ಚೆಡ್



ಯುದ್ಧದ ಸನ್ನಿವೇಶ



ಯುದ್ಧದ ಸನ್ನಿವೇಶ

## ಮಲದಕಲ್



ಶ್ರೀ ಪರಮಾನಂದ ದೇವಾಲಯದ ಬೆಟ್ಟದ ಹಿಂಬದಿಯಲ್ಲಿ ಪ್ರಾಗೈತಿಹಾಸಿಕ ಚಿತ್ರಗಳಿರುವ ನೆಲೆ



ಕುಟ್ಟಿದ ಚಿತ್ರ, ಮಲದಕಲ್ಲು



ಹುಲಿ ಮತ್ತು ಜಿಂಕೆಯ ಚಿತ್ರಗಳು, ಮಲದಕಲ್ಲು



ಕುಟ್ಟಿದ ಎತ್ತಿನ ಚಿತ್ರಗಳು, ಮಲದಕಲ್ಲು



ಜಿಂಕೆ ಮತ್ತು ಗೂಳಿಗಳ ಗುಂಪು ಚಿತ್ರ, ಮಲದಕಲ್ಲು



ಕುಟ್ಟಿದ ಊಸರವಳ್ಳಿಯ ಚಿತ್ರ, ಮಲದಕಲ್ಲು

## ಪಿಕ್ಲಿಹಾಳ



ಒಂದನೆಯ ಪ್ರಾಗೈತಿಹಾಸಿಕ ವರ್ಣಚಿತ್ರಗಳಿರುವ ನೆಲೆ, ಪಿಕ್ಲಿಹಾಳ



ಕೆಂಪು ವರ್ಣದ ಗೂಳಿಯ ಚಿತ್ರ



ಪ್ರಾಗೈತಿಹಾಸಿ ವರ್ಣಚಿತ್ರಗಳಿರುವ ಎರಡನೆಯ ನೆಲೆ, ಪಿಕ್ಲಿಹಾಳ



ಪ್ರಾಗೈತಿಹಾಸಿ ವರ್ಣಚಿತ್ರಗಳಿರುವ ಬೆಟ್ಟವನ್ನು ಖಾಸಗಿಯವರು ನಾಶಗೊಳಿಸಿರುವ ದೃಶ್ಯ



ಪ್ರಾಗೈತಿಹಾಸಿ ವರ್ಣಚಿತ್ರಗಳ ನೆಲೆ, ಕ್ರಿಶ್ಚಿಯನ್ ಶಾಲೆಯ ಹಿಂಬದಿಯ ಬೆಟ್ಟ ಸಿರವಾರ



ಬಿಳಿ ವರ್ಣದ ಮನುಷ್ಯಾಕೃತಿಯ ಚಿತ್ರಗಳು



ಕುಟ್ಟಿದ ನವಿಲಿನ ಚಿತ್ರ, ಮಸ್ಕಿ



ಕುಟ್ಟಿದ ಹುಲಿಯ ಚಿತ್ರ, ಮಸ್ಕಿ



ಕುಟ್ಟಿದ ಮತ್ತು ಗೀರಿದ ಎತ್ತು ಹಾಗೂ ಜಿಂಕೆಗಳ ಚಿತ್ರಗಳು, ಮಸ್ಕಿ



ಕುಟ್ಟಿದ ಮತ್ತು ಗೀರಿದ ಬೃಹದಾಕಾರದ ಹುಲಿಯ ಚಿತ್ರ

# ಬಿಲ್ಲಮರಾಯನ ಗುಡ್ಡ ಲಿಂಗಸೂಗುರು



ಕುಟ್ಟು ಮತ್ತು ಗೀರು ಚಿತ್ರಗಳಿರುವ ನೆಲೆ, ಬಿಲ್ಲಮರಾಯನಗುಡ್ಡ



ಕುಟ್ಟಿದ ಮತ್ತು ಗೀರಿದ ಮನುಷ್ಯ ಮತ್ತು ಕುದುರೆಯ ಚಿತ್ರ, ರಾಕ್ಷಸಗುಡ್ಡ



ಶ್ರೀ ಸಿದ್ಧೇಶ್ವರ ಮತ್ತು ಸುಗುರೇಶ್ವ ದೇವಸ್ಥಾನದ
ಹಿಂಬದಿಯ ಬೃಹತ್ ಬಂಡೆಯಲ್ಲಿ ಪ್ರಾಗೈತಿಹಾಸಿಕ ವರ್ಣಚಿತ್ರಗಳಿರುವ ನೆಲೆ



ಶ್ರೀ ಸಿದ್ಧೇಶ್ವರ ಮತ್ತು ಸುಗುರೇಶ್ವ ದೇವಸ್ಥಾನದ
ಹಿಂಬದಿಯ ಬೃಹತ್ ಬಂಡೆಯಲ್ಲಿ ಕೆಂಪು ವರ್ಣದ ನಕ್ಷ ಚಿತ್ರಗಳು



ಬೃಹತ್ ಬಂಡೆಯಲ್ಲಿ ಕುಟ್ಟಿದ ಕಾಡು ಎಮ್ಮೆಗಳ ಚಿತ್ರಗಳು, ಎಮ್ಮೆಗುಡ್ಡ



ಬಂಡೆಯ ಮೇಲೆ ಎಮ್ಮೆಯ ರೇಖಾಚಿತ್ರ, ಎಮ್ಮೆಗುಡ್ಡ

ಗೌಡರ ಮನೆಯ ನಕ್ಷೇ.




ದೌಲತ ಮಹಲ್

ಅಧ್ಯಾಯ – ಐದು

# ರಾಯಚೂರು ಜಿಲ್ಲೆಯ ಶಿಷ್ಟಪದ ಭಿತ್ತಿಚಿತ್ರಕಲೆ

ಮಾನವನು ನಾಗರಿಕ ಬದುಕಿಗೆ ಅಡಿ ಇಟ್ಟಾಗ ಜೀವನದ ಪ್ರತಿಯೊಂದು ಸಂಗತಿಗಳಲ್ಲೂ ರೀತಿ ನೀತಿಗಳು, ಕಟ್ಟುಪಾಡುಗಳು, ನಿರ್ದಿಷ್ಟ ವಿಧಾನಗಳನ್ನು ಅನುಸರಿಸತೊಡಗಿದನು. ಅದರಂತೆ ಚಿತ್ರಕಲೆಯಲ್ಲಿಯೂ ಇಂತಹ ರೀತಿ–ನೀತಿಗಳು, ಮಾರ್ಗಸೂಚಿಗಳನ್ನು ಅನುಸರಿಸತೊಡಗಿದನು. ಪ್ರಾಗಿತಿಹಾಸ ಕಾಲದಲ್ಲಿ ತನಗೆ ಅಂದಕಂಡಂತೆ ತಕ್ಷಣದ ಭಾವಾಭಿವ್ಯಕ್ತಿಗೆ ಅನುಸಾರವಾಗಿ ಚಿತ್ರಗಳನ್ನು ರಚಿಸುತ್ತಿದ್ದರೆ, ನಾಗರಿಕ ಹಂತದಲ್ಲಿ ಪ್ರತಿಯೊಂದು ಚಿತ್ರರಚನೆ ಹಾಗೂ ವಿಧಾನಗಳಿಗೆ ಮಾರ್ಗಸೂಚಿಗಳನ್ನು ಅನುಸರಿಸತೊಡಗಿದನು. ಚಿತ್ರದ ಅಳತೆ, ವಿಷಯಗಳಿಗೆ ತಕ್ಕಂತಹ ಆಕಾರ ಮತ್ತು ಭಾವನೆಗಳ ಭಿನ್ನತೆ, ಪೂರಕವಾದ ವರ್ಣಲೇಪನ, ವಿಷಯಗಳ ಆಯ್ಕೆ ಮುಂತಾದ ಎಲ್ಲದರಲ್ಲಿಯೂ ನಿರ್ದಿಷ್ಟ ವಿಧಾನ, ಮಾರ್ಗಸೂಚಿ ಮತ್ತು ಚೌಕಟ್ಟುಗಳನ್ನು ಹಾಕಿಕೊಂಡು ಚಿತ್ರಿಸತೊಡಗಿದನು. ಹೀಗೆ ಒಂದು ಮಾರ್ಗಸೂಚಿಗೆ ಅನುಸಾರವಾಗಿ ಚಿತ್ರಿಸಲ್ಪಟ್ಟ ಕಲಾಕೃತಿಗಳನ್ನು ಮುಂದಿನ ವಿದ್ವಾಂಸರು ಶಿಷ್ಟಪದ ಚಿತ್ರಕಲೆ ಎಂದು[೧] ಕರೆಯತೊಡಗಿದರು. ಇದನ್ನು ಮಾರ್ಗಸಂಪ್ರದಾಯದ ಚಿತ್ರಕಲೆ ಎಂತಲೂ ಗುರುತಿಸಲಾಗಿದೆ.

ರಾಯಚೂರು ಜಿಲ್ಲೆಯಲ್ಲಿ ಶಿಷ್ಟ ಸಂಪ್ರದಾಯದ ಭಿತ್ತಿಚಿತ್ರಗಳು ಮುಖ್ಯವಾಗಿ ಎರಡು ಕಡೆಗೆ ಕಂಡುಬಂದಿವೆ.

೧. ಖಾಜಿನ ಗೌಡರ ಮನೆಯಲ್ಲಿರುವ ಭಿತ್ತಿಚಿತ್ರಗಳು

೨. ಆಂಜನೇಯ ದೇವಾಲಯದಲ್ಲಿರುವ ಭಿತ್ತಿಚಿತ್ರಗಳು

೦೧. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪು–೦೯

## ೫.೧. ಖಾಜನಗೌಡರ ಮನೆಯಲ್ಲಿಯರುವ ಭಿತ್ತಿಚಿತ್ರಗಳು

ಕಾಷ್ಠ ಶಿಲ್ಪ, ಗಾರೆ, ಗಚ್ಚುಗಳಿಂದ ಕೂಡಿದ ಈ ಮನೆಯು ಎರಡು ಶತಮಾನಗಳ ಕಾಲಘಟ್ಟದ ಜನ ಜೀವನದೊಂದಿಗೆ ಅವರ ಆಸೆ, ಅಭಿಲಾಷೆ, ಕಲಾತ್ಮಕ ಅಭಿರುಚಿಯೊಂದಿಗೆ ಜನರ ಬದುಕನ್ನು ಕಟ್ಟಿಕೊಡುತ್ತದೆ. ಕಲ್ಬುರ್ಗಿಯ ಸೂಫಿ ಸಂತರಾಗಿರುವ ಖಾಜಾ ಬಂದೇನವಾಜ್ ಅವರ ಅನುಗ್ರಹ ಪಡೆದುಕೊಂಡು ಹುಟ್ಟಿಬಂದ, ಖಾಜನಗೌಡರ ಹಿರಿಯರು ಇಂದಿನ ದೇವದುರ್ಗ ತಾಲೂಕಿನ ಮಾನಸಗಲ್ ಗ್ರಾಮದವರು. ಆರ್ಯ ಈಡಿಗ ಜನಾಂಗದ ಈ ಗುತ್ತೆದಾರರು ಕೃಷಿಕರು. ಜೊತೆಗೆ ಈಚಲಗಿಡದ ಸೇಂಧಿ ಇಳಿಸುವ ಈಳಿಗರು ಕೂಡ ಹೌದು. ಈ ಪರಂಪರೆಯ ಜನಾಂಗದಲ್ಲಿ ಹುಟ್ಟಿ ಬಂದಿರುವವರೇ ಖಾಜನಗೌಡರು. ಮುಂದೆ ಅವರು ಕೃಷಿಕರಾಗಿ, ಶ್ರಮಿಕರಾಗಿ, ವ್ಯಾಪಾರಿಗಳಾಗಿ, ಅಬಕಾರಿ ಗುತ್ತಿಗೆದಾರರಾಗಿ ಸಿರಿವಂತರಾಗಿ ಬಾಳಿದವರು. ಈಡಿಗ ಜನಾಂಗದ ಮನೆ ದೈವವಾಗಿರುವುದು ದೇವದುರ್ಗ ತಾಲೂಕಿನ ಜಾಲಿಹಳ್ಳಿ ಸಮೀಪದ ಶ್ರೀರಂಗನಾಥ ದೇವರು. ಬಹುಕಾಲದಿಂದ ಶ್ರೀರಂಗನಾಥನಿಗೆ ಖಾಜನಗೌಡರ ತಂದೆ ನರಸನಗೌಡರು ಹಲವು ವಿಧವಾದ ಭಕ್ತಿ ಗೌರವಗಳಿಂದ ನಡೆದುಕೊಂಡವರೂ ಮಕ್ಕಳಾಗಲಿಲ್ಲ. ಎಲ್ಲರಂತೆ ಅವರು ಅನೇಕ ದೇವತೆಗಳಿಗೆ ಹರಕೆ ಹೊತ್ತರು. ಆದರೂ ಮಕ್ಕಳಾಗಲಿಲ್ಲ. ಕೊನೆಗೆ ಕಲ್ಬುರ್ಗಿಯ ಸೂಫಿ ಸಂತರಾದ ಖಾಜಾಬಂದೇ ನವಾಜರ ಕೃಪೆಯಿಂದ ಗಂಡು ಮಗು ಜನಿಸಿತು. ಜನಿಸಿರುವ ಕೂಸಿಗೆ ಖಾಜನಗೌಡ ಎಂದೇ ನಾಮಕರಣ ಮಾಡಲಾಯಿತು. ಈತನೊಬ್ಬ ಹಿಂದೂ ಮುಸ್ಲಿಂರ ಭಾವೈಕ್ಯತೆಯ ವಾರಸುದಾರನಂತೆ ಬಾಳಿದನಲ್ಲದೆ ಆ ಸೌಹಾರ್ದತೆಯನ್ನು ಬೆಳೆಸಿದ. ಮುಂದೆ ಇವನೇ ರಾಯಚೂರಿನ ಚಿತ್ರಗಳಿರುವ ವಾಡೆಯನ್ನು ಕಟ್ಟಿಸಿದನು.

ರಾಯಚೂರು ನಗರದ ಮಡ್ಡಿಪೇಟೆಯಲ್ಲಿ ಸರದಾರ ವಲ್ಲಬಾಯಿ ಪಟೇಲ ರಸ್ತೆಯ ಪೂರ್ವದಿಕ್ಕಿನಲ್ಲಿ ಮೂರು ಅಂತಸ್ತುಗಳನ್ನು ಹೊತ್ತು ನಿಂತಿರುವ ಈ ಮನೆಯು ಕಲಾಕೋಶದಂತಿದೆ.[೨] ಖಾಜನಗೌಡರ ಮನೆಯ ತೈಯಾರಿಗೆ ಮೂಲ ಕಾರಣ ಆತನ ವ್ಯಾಪಾರದ ವಹಿವಾಟು. ಅಂದಿನ ಹೈದರಾಬಾದ ಆಡಳಿತದ ೧೪ ಜಿಲ್ಲೆಗಳಲ್ಲಿ ಸೇಂಧಿ ಗುತ್ತಿಗೆದಾರನಾಗಿ ಬಾಳಿದ ಖಾಜನಗೌಡರಿಗೆ ಆಡಳಿತಕ್ಕೆ ಯೋಗ್ಯವಾದ ಕಾರ್ಯಾಲಯ ಬೇಕಾಗಿತ್ತು. ಕಾರ್ಯಾಲಯದಲ್ಲಿ ಸಿಬ್ಬಂದಿ ಬೇಕಾಗಿತ್ತು. ವಿಭಜನೆ ಮಾದರಿಯಲ್ಲಿ ಆಡಳಿತವನ್ನು ರೂಪಿಸಿದ ಖಾಜನಗೌಡರು ಈ ಮನೆಯನ್ನು ನಿರ್ಮಾಣ ಮಾಡಿದರು.

### ಮನೆಯ ವಾಸ್ತುವಿನ್ಯಾಸ

ಪೂರ್ವಾಭಿಮುಖವಾಗಿ ನಿಂತಿರುವ ಈ ಮನೆಯು ೮೦.೧೦ ಅಡಿ ಪೂರ್ವ, ಪಶ್ಚಿಮಕ್ಕೆ

೦೨. ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ : ಸುರಪುರ ಚಿತ್ರಕಲೆ, ಪು-೯೮

ಉದ್ದಳತೆ ಇದ್ದು ೨೦ ಅಡಿ ಅಗಲವಾಗಿದೆ. ಒಂಭತ್ತು ಅಂಕಣಗಳ ಈ ಮನೆಯ ಹೊರಕಟ್ಟೆಯು ಹೆಬ್ಬಾಗಿಲಿನ ಇಕ್ಕೆಲದಲ್ಲಿದೆ. ಮನೆಯ ಮುಂದಿನ ಭಾವಣಿಯು ಹೊರಚಾಚಿಕೊಂಡಿರುವುದರಿಂದ ಮನೆಯ ಅಂದಕ್ಕೆ ಮೆರಗು ಬಂದಿದೆ.[೩] ಕಟ್ಟೆಯ ತುದಿಯ ಮೇಲೆ ಮತ್ತು ಗೋಡೆಯಲ್ಲಿ ಕಂಬಗಳು ಇವೆ. ಮೇಲ್ ಬೋದಿಗೆ ನಾಗವಂದಿಗೆ ಮೇಲೆ ಪೂರ್ವ ಪಶ್ಚಿಮಗಳತ್ತ ಮರದ ತೊಲೆಗಳಿವೆ. ಹತ್ತು ಅಡಿಗಳಷ್ಟು ಉದ್ದದ ಈ ತೊಲೆಗಳು ಎರಡನೆ ಮಾಳಿಗೆಯ ಭಾವಣಿಗೂ ಆಸರೆಯಾಗಿವೆ.

ಭವ್ಯ ಹೆಬ್ಬಾಗಿಲಿನಿಂದ ಒಳ ಪ್ರವೇಶಿಸಿದರೆ ಕಿನ್ನರ ಲೋಕವನ್ನು ನೋಡಿದಂತಹ ಅನುಭವವಾಗುವುದು. ೧೬ ಚಾಚು ಕಂಬಗಳಿಂದ ಸುತ್ತುವರಿದಿರುವ ತೊಟ್ಟಿಯೊಂದು ಎದುರಾಗುವುದು. ಮೂರನೇ ಅಂತಸ್ತಿನ ಆಚೆಯ ಆಗಸದಿಂದ ಬರುವ ಸಮೃದ್ಧ ಬೆಳಕು, ಗಾಳಿ ಇಡೀ ಮನೆಯನ್ನು ವ್ಯಾಪಿಸಿಕೊಳ್ಳುವುದು. ಬಿಸಿಲು ನಾಡಿನ ರಾಯಚೂರು ಪರಿಸರಕ್ಕೆ ಯೋಚಿಸಿ ರೂಪಿಸಿರುವ ಈ ಮನೆಯ ವಾತಾವರಣ ನಿಯಂತ್ರಣದ ಯಂತ್ರದಂತೆ ಕಾರ್ಯವನ್ನು ನಿರ್ವಹಿಸುತ್ತದೆ. ಈ ಹಜಾರದಿಂದಲೇ ಒಳ ಕೋಣೆಗೆ ಉಪ ಕೋಣೆಗೆ ಹೋಗುವ ಬಾಗಿಲುಗಳಿವೆ. ಉತ್ತರಕ್ಕೆ ಮತ್ತು ದಕ್ಷಿಣಕ್ಕೆ ಮೇಲಿನ ಅಂತಸ್ತುಗಳಿಗೆ ಹೋಗಲು ಮೆಟ್ಟಿಲುಗಳಿವೆ. ಭಾರವನ್ನು ಸಮವಾಗಿ ವಿತರಿಸಿಕೊಳ್ಳುವ ರಚನೆಯೂ ಇಲ್ಲಿ ವಿಶೇಷವಾಗಿದೆ. ಈ ಮನೆಯ ಗೋಡೆಯು ದಪ್ಪ ೫೫ ಅಡಿಗಳ ಎತ್ತರದವರೆಗೆ ಬೆಳೆದು ನಿಂತಿದೆ.

**ನೀರು, ಗಾಳಿ ಮತ್ತು ಬೆಳಕಿನ ಕಲಾತ್ಮಕ ವಿನ್ಯಾಸ**

ಬಿಸಿಲು ನಾಡಿನ ಈ ರಾಯಚೂರು ಪರಿಸರಕ್ಕೆ ಹೊಂದುವಂತೆ ಈ ಮನೆಯನ್ನು ಯೋಚಿಸಲಾಗಿದೆ. ಪ್ರತಿ ಕೋಣೆಯಲ್ಲಿ ವಿಶೇಷವಾದ ಕಿಡಿಕಿಯನ್ನು ಕಲ್ಲು ಮತ್ತು ಇಟ್ಟಿಗೆಯ ತುಂಡುಗಳಿಂದ ಗಾರೆಯನ್ನು ಬಳಸಿಕೊಂಡು ಮಾಡಲಾಗಿದೆ. ಇವುಗಳನ್ನು ಕಮಾನಿನಾಕಾರದ ಜಾಲಂಧ್ರಗಳಂತೆ ನಿರ್ಮಿಸಲಾಗಿದೆ. ಕೂಡಲು ಹಾಸು ಬಂಡೆಗಳನ್ನು ಬಳಸಿಕೊಂಡಂತೆ ಒಂದೊಂದು ಗೋಡೆಯಲ್ಲಿ ಕಿಟಕಿಗಳನ್ನು ಜೋಡಿಸಲಾಗಿದೆ. ಇದು ಗಾಳಿಗೂ, ಬೆಳಕಿಗೂ ಯೋಗ್ಯವಾಗಿದೆ. ಪ್ರತಿ ಅಂತಸ್ತಿನಲ್ಲೂ ಸ್ನಾನಗೃಹಗಳಿದ್ದು ಕೆಲವು ಕೋಣೆಗಳಿಗೆ ಸ್ವತಂತ್ರ ಸ್ನಾನಗೃಹಗಳಿವೆ. ಕೆಲವು ಕೋಣೆಗಳು ಶೈಯಾಗಾರಗಳಾಗಿ ಇರುವಂತೆ, ಕೆಲವು ಸ್ನಾನದ ಮನೆಗಳು ಆಗಿವೆ. ಆಯಾ ಅಂತಸ್ತಿನ ನೀರು ಬಳಕೆಯಾಗಿ ಹೊರಗಡೆಗೆ ಸುಲಭವಾಗಿ ಹರಿದುಹೋಗುವ ವ್ಯವಸ್ಥೆಯೂ ಇಲ್ಲಿದೆ.

ಖಾಜನಗೌಡರ ವಾಡೆಯಲ್ಲಿ ಸಧ್ಯ ಶಯನಗೃಹ ಮತ್ತು ಸ್ನಾಗೃಹಗಳಲ್ಲಿ ಚಿತ್ರಗಳು ಕಂಡುಬರುತ್ತವೆ. ಈ ಎರಡೂ ಕಡೆಯ ಚಿತ್ರಗಳಲ್ಲಿ ಕೃಷ್ಣ ಕಥಾನಕಗಳಿಗೆ ಸಂಬಂಧಪಟ್ಟವುಗಳು ಹೆಚ್ಚಾಗಿವೆ. ಶಯನಗೃಹದಲ್ಲಿ

೦೩. ಜಾವಿದ್ ಹುಸೇನ್ : ಅಂದದ ಮನೆಯ ಚಂದದ ಚಿತ್ರಗಳು, ಪುಟ-೮

ಬೆಣ್ಣೆ ಕಳ್ಳ ಕೃಷ್ಣ, ಯಶೋಧೆಯೊಂದಿಗೆ ಕೃಷ್ಣ, ಕೊಳಲು ನುಡಿಸುತ್ತಿರುವ ಕೃಷ್ಣ, ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ ಮುಂತಾದ ಅನೇಕ ಚಿತ್ರಗಳಿವೆ. ಅದರಂತೆ ಸ್ನಾನಗೃಹದಲ್ಲಿ ಶೇಷಶಯನ ವಿಷ್ಣು, ಬೆಣ್ಣೆ ಕದಿಯುತ್ತಿರುವ ಕೃಷ್ಣ, ವಟಪತ್ರಶಯನ ಕೃಷ್ಣ, ಗೋಪಾಲಕರು ಹೀಗೆ ಹಲವಾರು ಚಿತ್ರಗಳಿವೆ. ಈ ಚಿತ್ರಗಳನ್ನು ಸಂಕ್ಷಿಪ್ತವಾಗಿ ಕೆಳಗಿನಂತೆ ವಿವೇಚಿಸಬಹುದು.

**ಖಾಜನಗೌಡರ ಮನೆಯ ಭಿತ್ತಿಚಿತ್ರಗಳು**

**೧. ಯಶೋಧೆಯೊಂದಿಗೆ ಕೃಷ್ಣ**

ಈ ಚಿತ್ರದಲ್ಲಿ ತಾಯಿ ಯಶೋಧೆಯು ಬಾಲಕ ಕೃಷ್ಣನನ್ನು ಮುದ್ದಿಸುತ್ತಿರುವ ದೃಶ್ಯವಿದೆ. ಇಲ್ಲಿ ತಾಯಿಯನ್ನು ಹಳದಿ ಬಣ್ಣದಿಂದ ಚಿತ್ರಿಸಲಾಗಿದೆ. ಅವಳು ದಪ್ಪನೆಯ ದುಂಡು ಮುಖವನ್ನು ಹೊಂದಿದ್ದಾಳೆ. ಕುತ್ತಿಗೆಯಲ್ಲಿ ಬಂಗಾರದ ಆಭರಣವನ್ನು ಧರಿಸಿದ್ದಾಳೆ. ಆಭರಣಗಳು ಸ್ಪಷ್ಟ ವಿನ್ಯಾಸದಿಂದ ಕೂಡಿರುವುದಿಲ್ಲ. ಹಣೆಯಲ್ಲಿ ಕೆಂಪು ಬಣ್ಣದ ಸಿಂಧೂರವಿದೆ. ಕೆಂಪು ಬಣ್ಣದ ರವಿಕೆ ಹಾಗೂ ಹಸಿರು ಬಣ್ಣದ ಸೀರೆಯನ್ನು ಧರಿಸಿದ್ದಾಳೆ. ಅವಳ ಮುಖದಲ್ಲಿ ವಾತ್ಸಲ್ಯವು ಎದ್ದು ಕಾಣುವಂತೆ ಕಲಾವಿದನು ಚಿತ್ರಿಸಿದ್ದಾನೆ. ತಾಯಿಯ ಮುಖದಲ್ಲಿನ ಎರಡು ಕಣ್ಣುಗಳಲ್ಲಿನ ಬಣ್ಣಗಳು ಉದರಿ ಹಾಳಾಗಿರುವುದು ಕಂಡುಬರುತ್ತದೆ. ಕಿವಿಗಳು ಆಭರಣಗಳಿಂದ ಪೂರ್ಣವಾಗಿ ಮುಚ್ಚಿಕೊಂಡಿವೆ. ತೋಳುಗಳಲ್ಲಿ ಕೃಷ್ಣನನ್ನು ಹಿಡಿದು ಮುದ್ದಿಸುತ್ತಿದ್ದಾಳೆ. ಬಾಲಕ ಕೃಷ್ಣನನ್ನು ನೀಲಿ ಬಣ್ಣದಿಂದ ಚಿತ್ರಿಸಲಾಗಿದೆ. ಅವನ ಕೊರಳಲ್ಲಿ ಆಭರಣಗಳು ಅಪೂರ್ಣವಾಗಿ ಚಿತ್ರಿತಗೊಂಡಿವೆ. ಕೃಷ್ಣನ ಹಣೆಯ ಮೇಲೆ ನಾಮವನ್ನು ಹಾಕಲಾಗಿದೆ. ಕೃಷ್ಣ ಮುಖದ ವರ್ಣವು ಹಾಳಾಗಿರುವುದನ್ನು ನೋಡಬಹುದು. ಈ ಕೃತಿಯಲ್ಲಿ ತಾಯಿ ಮತ್ತು ಮಗುವಿಗೆ ಕಲಾವಿದನು ಕಪ್ಪು ಮತ್ತು ಕೆಂಪು ಬಣ್ಣ ಲೇಪಿಸಿ ದಪ್ಪನಾದ ಹೊರ ರೇಖೆಗಳನ್ನು ಎಳೆಯಲಾಗಿದೆ.

**೨. ಗೋಪಿಕಾ ಸ್ತ್ರೀಯರನ್ನು ಕೃಷ್ಣ ಛೇಡಿಸುತ್ತಿರುವುದು**

ಈ ಚಿತ್ರದಲ್ಲಿ ಕೃಷ್ಣನು ಮರದ ಮೇಲೆ ಕುಳಿತು ಗೋಪಿಕಾಸ್ತ್ರೀಯರನ್ನು ಛೇಡಿಸುತ್ತಿದ್ದಾನೆ. ಮರದ ಕೆಳಗಡೆ ಒಬ್ಬ ಸ್ತ್ರೀಯು ಕೈಯಲ್ಲಿ ಕೋಲನ್ನು ಹಿಡಿದು ಶ್ರೀಕೃಷ್ಣನನ್ನು ದಂಡಿಸಲು ಮರವನ್ನು ಹತ್ತುತ್ತಿದ್ದಾಳೆ. ಇನ್ನುಳಿದ ಗೋಪಿಕೆಯರು ಎಡ ಮತ್ತು ಬಲಬದಿಯಲ್ಲಿ ಸಾಲಾಗಿ ನಿಂತು ಕೈಚಾಚಿ ಕೃಷ್ಣನಲ್ಲಿ ಬೇಡುತ್ತಿದ್ದಾರೆ. ಗೋಪಿಕಾ ಸ್ತ್ರೀಯರ ಮೈಬಣ್ಣವು ಹಳದಿ ಮತ್ತು ಬಿಳಿ ಬಣ್ಣಗಳಿಂದ, ಕೆಂಪು ಮತ್ತು ಕಂದು ಬಣ್ಣದಿಂದ ಸೀರೆಗಳನ್ನು ಚಿತ್ರಿಸಲಾಗಿದೆ. ಇವರು ಅಲಂಕಾರಿಕವಾಗಿರುವ ಆಭರಣಗಳು ಹಾಕಿಕೊಂಡು ನಿಂತಿದ್ದಾರೆ. ಅವರ ಕೆಳಗಡೆ ನೀರಿನಲ್ಲಿ ಜಲಚರಗಳು ಹಾವು, ಏಡಿ, ಮೀನು, ಆಮೆ

ಇನ್ನೂ ಮುಂತಾದವುಗಳನ್ನು ಕಪ್ಪು ವರ್ಣದಿಂದ ಮತ್ತು ನೀರನ್ನು ನೀಲಿ ವರ್ಣದಿಂದ ಕಲಾವಿದನು ಚಿತ್ರಿಸಿದ್ದಾನೆ. ಕಲಾಕೃತಿಯ ತುದಿಯಲ್ಲಿ ಕೆಂಪು ಹೂಗಳು, ಹಸಿರು ಬಳ್ಳಿಗಳ ವಿನ್ಯಾಸದ ನಕ್ಷೆಯ ರಚನೆ ಮಾಡಿದ್ದಾನೆ.

**೩. ಬೆಣ್ಣೆ ಕದಿಯುತ್ತಿರುವ ಕೃಷ್ಣ**

ಈ ಕಲಾಕೃತಿಯು ಕೃಷ್ಣನ ಬಾಲ ಲೀಲೆಗಳಿಗೆ ಸಂಬಂಧಿಸಿದೆ. ಬೆಣ್ಣೆ ಕದಿಯುತ್ತಿರುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ಬಿಳಿಯ ಗೋಡೆಯ ಮೇಲೆ ಹಳದಿ ವರ್ಣದ ಕಂಭವಿದ್ದು, ಹಳದಿ ಬಣ್ಣದ ಏಳು ಮೆಟ್ಟಿಲುಗಳ ಏಣಿಯನ್ನು ಪೂರಕವಾಗಿಟ್ಟುಕೊಂಡು ಕೃಷ್ಣು ಬೆಣ್ಣೆಯನ್ನು ಕದಿಯುತ್ತಿರುವ ದೃಶ್ಯವಿದೆ. ಇಲ್ಲಿ ಕೃಷ್ಣನಿಗೆ ನೀಲಿ ವರ್ಣ ಆಭರಣಗಳಿಗೆ ಹಳದಿ ವರ್ಣ ಲೇಫಿಸಲಾಗಿದೆ. ಮಡಿಕೆಯೊಳಗಿನ ಬೆಣ್ಣೆಯನ್ನು ಕೃಷ್ಣ ಕದಿಯುತ್ತಿದ್ದಾನೆ. ಅವನ ಮುಂದೆ ಗೋಪಿಕೆಯು ಕೈಯಲ್ಲಿ ಕೋಲನ್ನು ಹಿಡಿದು ದಂಡಿಸುವಂತೆ ನಿಂತಿದ್ದಾಳೆ. ಅವಳ ಹಿಂದೆ ಕೃಷ್ಣನು ಅವಳ ಜಡೆಯನ್ನು ಎಳೆಯುತ್ತಿರುವ ದೃಶ್ಯವನ್ನು ನೋಡಬಹುದು. ಪಕ್ಕದಲ್ಲಿ ಕೃಷ್ಣ ಮತ್ತು ರುಕ್ಮೀಣಿ ಇಬ್ಬರೂ ಪ್ರೀತಿಯಲ್ಲಿ ಮೈಮರೆತು ನಿಂತಿರುವ ದೃಶ್ಯವಿದೆ. ಇದರಲ್ಲಿ ಕೃಷ್ಣನಿಗೆ ನೀಲಿ ವರ್ಣವಿದ್ದು, ಅವನ ಮುಖದಲ್ಲಿ ದಪ್ಪನೆಯ ಮತ್ತು ಉದ್ದನೆಯ ಮೀಸೆಯಿದೆ. ಅವನ ಅಲಂಕಾರಿಕವಾಗಿರುವ ಬಂಗಾರದ ಆಭರಣಗಳನ್ನು ಧರಿಸಿದ್ದಾನೆ. ಕೃಷ್ಣನು ಹಳದಿ ಮತ್ತು ಕೆಂಪು ಬಣ್ಣದ ಉಡುಪನ್ನು ಧರಿಸಿದ್ದಾನೆ. ಮತ್ತು ಕೃಷ್ಣನ ಬಲ ತೋಳಿನಲ್ಲಿ ರುಕ್ಮೀಣಿಯನ್ನು ಹಿಡಿದು ಪ್ರೀತಿಯಲ್ಲಿ ಮೈಮರೆತು ನಿಂತಿದ್ದಾನೆ. ರುಕ್ಮೀಣಿಯನ್ನು ಕಲಾವಿದನು ಹಳದಿ ಬಣ್ಣದಿಂದ ರಚಿಸಿದ್ದಾನೆ. ರುಕ್ಮಿಣಿಗೆ ಕೆಂಪು ರವಿಕೆಯನ್ನು ಮತ್ತು ಹಸಿರು ಸೀರೆ ಇದೆ. ಅವರ ಕೆಳಗಡೆ ಕುಬ್ಜ ರೀತಿಯಲ್ಲಿ ಕೃಷ್ಣನು ಬೆಣ್ಣೆ ಕದಿಯುತ್ತಿರುವುದು, ಗೋಪಿಕೆಯರು ಕೈಯಲ್ಲಿ ಕೋಲನ್ನು ಹಿಡಿದು ನಿಂತಿರುವುದು ಕಂಡುಬರುತ್ತದೆ. ಈ ಚಿತ್ರ ಸ್ಪಷ್ಟವಾಗಿ ಕಾಣಿಸುವುದಿಲ್ಲ.ಕೃಷ್ಣ ಮತ್ತು ರುಕ್ಮೀಣಿಯ ಮುಖಭಾಗದ ಚಿತ್ರವು ಹಾಳಾಗಿದ್ದು, ಅದರ ಬಣ್ಣ ಉದುರಿ ಹೋಗಿದೆ. ಕಪ್ಪು ಮತ್ತು ಕೆಂಪು ಬಣ್ಣಗಳ ಮಿಶ್ರಣದಿಂದ ಚಿತ್ರಗಳ ಹೊರ ರೇಖೆಗಳನ್ನು ದಪ್ಪಗೆ ಎಳೆಯಲಾಗಿದೆ. ಈ ಕೃತಿಯ ಮೇಲಿನ ಭಾಗದಲ್ಲಿ ಅಲಂಕಾರಿಕವಾಗಿ ಹೂದಾಣಿಗಳನ್ನು ಕುಂಡಗಳನ್ನು ರಚಿಸಲಾಗಿದೆ.

**೪. ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ**

ಈ ದೃಶ್ಯದಲ್ಲಿ ಕೃಷ್ಣನು ಗೋಪಿಕೆಯರ ವಸ್ತ್ರಾಪಹರಣ ಮಾಡಿಕೊಂಡು ಗಿಡದ ಮೇಲೆ ಕುಳಿತು ಕೊಳಲು ಉದುತ್ತಿರುವುದನ್ನು ಚಿತ್ರಿಸಲಾಗಿದೆ. ಕೃಷ್ಣನು ಹಸಿರು ಗಿಡದಲ್ಲಿ ಕುಳಿತು ಕೊಳಲು ಉದುತ್ತಿರುವ ಕೃಷ್ಣನಿಗೆ ನೀಲಿ ಬಣ್ಣವನು ಲೇಪಿಸಿದೆ. ಅಲಂಕಾರಿಕವಾದ ಆಭರಣಗಳನ್ನು ಹಾಕಿದ್ದು, ಕೆಂಪು ಮತ್ತು

ಹಳದಿ ವಸ್ತ್ರವನ್ನು ಧರಿಸಿದ್ದಾನೆ. ಕೃಷ್ಣನು ಕುಳಿತಿರುವ ಮರದಲ್ಲಿ ಅಳಿಲುಗಳು ಓಡಾಡುತ್ತಿವೆ. ಅಳಿಲುಗಳಿಗೆ ಕಪ್ಪು ಬಣ್ಣದ ಲೇಪನವಿದೆ. ಮರದ ಎಲೆಗಳನ್ನು ಹಸಿರು ಬಣ್ಣದಿಂದ ಕೂಡಿದ್ದು, ಕೃಷ್ಣನು ಅಪಹರಿಸಿದ ಬಣ್ಣ ಬಣ್ಣಗಳ ಸೀರೆಗಳನ್ನು ಚಿತ್ರಿಸಲಾಗಿದೆ. ಮತ್ತು ಮರದ ಕೆಳಗೆ ಒಬ್ಬ ಸ್ತ್ರೀಯು ಹಳದಿ ಬಣ್ಣದ ಆಭರಣಗಳನ್ನು ಧರಿಸಿ, ಕೆಂಪು ಸೀರೆ, ಹಸಿರು ರವಿಕೆ ತೊಟ್ಟು ಮರವನ್ನು ಹತ್ತುತ್ತಿದ್ದಾಳೆ. ಎಡಬದಿಯಲ್ಲಿರುವ ಗೋಪಿಕಾ ಸ್ತ್ರೀಯರು ಹಳದಿ ಬಣ್ಣದವರಾಗಿದ್ದು, ಕೆಂಪು, ಹಳದಿ ಸೀರೆಯನ್ನು ಧರಿಸಿದ್ದಾರೆ. ಎಲ್ಲರೂ ಕೈಯತ್ತಿ ಕೃಷ್ಣನನ್ನು ಬೇಡುತ್ತಿದ್ದಾರೆ. ಈ ಕಲಾಕೃತಿಯಲ್ಲಿ ವಿಶೇಷವಾಗಿ ಗೋಪಿಕೆಯರನ್ನು ಬೆತ್ತಲೆಯಾಗಿ ಚಿತ್ರಿಸಿರುವುದಿಲ್ಲ. ಕೆಳಭಾಗದಲ್ಲಿ ನೀಲಿ ಬಣ್ಣದಿಂದ ನದಿಯನ್ನು ಚಿತ್ರಿಸಿದ್ದಾರೆ. ನೀರಿನಲ್ಲಿ ಹಲಚರ ಜೀವಿಗಳಾದ ಮೀನುಗಳು, ಆಮೆಗಳು, ಹಾವುಗಳು, ಏಡಿಗಳ ಚಿತ್ರಗಳನ್ನು ಕಪ್ಪು ಬಣ್ಣದ ರೇಖೆಗಳಿಂದ ಕಲಾತ್ಮಕವಾಗಿ ರಚನೆ ಮಾಡಲಾಗಿದೆ.

**೫. ಸಂಗೀತ ಕಚೇರಿಯ ದೃಶ್ಯ**

ಈ ಚಿತ್ರದಲ್ಲಿ ಹಳದಿ ಬಣ್ಣದ ಎರಡು ದೊಡ್ಡ ಕಂಬಗಳಿವೆ. ಶ್ರೀಕೃಷ್ಣ ಮತ್ತು ರುಕ್ಮಿಣಿಯು ಸಿಂಹಾಸನದ ಮೇಲೆ ಕುಳಿತು ಸಂಗೀತ ಕೇಳುತ್ತಿದ್ದಾರೆ. ಈ ಕೃತಿಯಲ್ಲಿ ಕೃಷ್ಣನನ್ನು ಹಿರಿಯ ವಯಸ್ಸಿನವನಾಗಿ ಚಿತ್ರಿಸಲಾಗಿದೆ. ಮುಖದಲ್ಲಿ ದಪ್ಪನೆಯ ಮೀಸೆಯಿದೆ. ಅವನು ಅಲಂಕಾರಿಕವಾದ ಆಭರಣವನು ಧರಿಸಿದ್ದಾನೆ. ಹಳದಿ ಬಣ್ಣದ ಉಡುಪನ್ನು ಹಾಕಿಕೊಂಡು ಪೀಠದ ಮೇಲೆ ರುಕ್ಮೀಣಿಯನ್ನು ಕೂಡಿಸಿಕೊಂಡಿದ್ದಾನೆ. ರುಕ್ಮೀಣಿಯನ್ನು ಹಳದಿ ಬಣ್ಣದಿಂದ ಚಿತ್ರಿಸಲಾಗಿದೆ. ಸಹಜವಾಗಿ ಆಭರಣವನ್ನು ಮತ್ತು ಕೆಂಪು ಸೀರೆಯನ್ನು ಧರಿಸಿ ಕುಳಿತಿದ್ದಾಳೆ. ಅವರ ಹಿಂದೆ ಸೇವಕಿಯೊಬ್ಬಳು ಕೊಡೆಯನ್ನು ಹಿಡಿದಿದ್ದಾಳೆ. ಇನ್ನೊರ್ವ ಸೇವಕಿತು ಸೂರ್ಯ ಮುಖವನ್ನು ಹಿಡಿದಿದ್ದಾಳೆ. ಈ ಕಲಾಕೃತಿಗಳಲ್ಲಿ ೧೩ ಮಂದಿ ಗಾಯಕಿಯರು ಒಂದೇ ಬಾರಿಗೆ ಸಂಗೀತದಲ್ಲಿ ತೊಡಗಿದ್ದಾರೆ. ಮೊದಲನೆಯ ಸ್ತ್ರೀಯು ಬಿಳಿಯ ಬಣ್ಣವನ್ನು ಹೊಂದಿದ್ದು, ಕೆಂಪು ಕುಪ್ಪಸ, ಹಸಿರು ಬಣ್ಣದ ಸೀರೆಯನ್ನು ಧರಿಸಿದ್ದಾಳೆ. ಅವಳು ಕೈಯಲ್ಲಿ ವೀಣೆಯನ್ನು ಹಿಡಿದು ನುಡಿಸುತ್ತಿರುವಳು. ಇನ್ನುಳಿದ ಸ್ತ್ರೀಯರು ಕೈ ಮುಗಿಯುತ್ತಾ ನಿಂತಿರುವರು. ಮತ್ತು ಇನ್ನು ಕೆಲವರು ಕುಳಿತು ನಮಸ್ಕರಿಸುತ್ತಿರುವ ದೃಶ್ಯವಿದೆ. ಇಲ್ಲಿಯ ಸ್ತ್ರೀಯರು ಕೆಂಪು, ಹಳದಿ ಬಣ್ಣದ ಉಡುಪನ್ನು ಧರಿಸಿದ್ದಾರೆ. ಇನ್ನು ಕೆಲವರು ಹಳದಿ ಮತ್ತು ಹಸಿರು ಉಡುಪನ್ನು ಧರಿಸಿದ್ದಾರೆ. ಈ ಕಲಾಕೃತಿಗಳಲ್ಲಿ ಚಿತ್ರಗಳು ಅಲ್ಲಲ್ಲಿ ಹಾಳಾಗಿ ಹೋಗಿರುವ ದೃಶ್ಯವನ್ನು ಕಾಣಬಹುದು.

**೬. ಮಹಾವಿಷ್ಣುವಿನ ಚಿತ್ರ**

ಈ ಕಲಾಕೃತಿಯಲ್ಲಿ ಕಲಾವಿದನು ವಿಷ್ಣುವಿನ ಅವತಾರದ ರೂಪವನ್ನು ಚಿತ್ರಿಸಿದ್ದಾನೆ. ಕೊಳಲು

ನಮಸ್ಕರಿಸುತ್ತಾ ನಿಂತಿದ್ದಾನೆ. ಇಲ್ಲಿ ಗರುಡನಿಗೆ ಹಳದಿ ಬಣ್ಣವನ್ನು ಲೇಪಿಸಿದ್ದು ಮುಖದಲ್ಲಿ ಹಳದಿ ಬಣ್ಣವು ಉದುರಿ ಹಾಳಾಗಿದೆ. ಗರುಡನು ಎರಡು ಕೈಗಳನ್ನು ಹೊಂದಿದ್ದಾನೆ. ಕೆಂಪು ಮತ್ತು ಹಸಿರು ಬಣ್ಣದ ಉಡುಪನ್ನು ಧರಿಸಿ ನಿಂತಿದ್ದಾನೆ. ಒಟ್ಟಾರೆ ಈ ಚಿತ್ರವಿರುವ ಗೋಡೆಯು ಬಿರುಕು ಬಿಟ್ಟು ಹಾಳಾಗಿರುವುದಲ್ಲದೆ ಕಲಾಕೃತಿಯಲ್ಲಿ ಅಲ್ಲಲ್ಲಿ ವರ್ಣಗಳು ಕಿತ್ತು ಹೋಗಿರುವುದನ್ನು ನಾವು ಕಾಣಬಹುದು.

### ೮. ನಾಟ್ಯ ಭಂಗಿಯ ದೇವಿಯ ಚಿತ್ರ

ಈ ಚಿತ್ರದಲ್ಲಿ ದೇವತೆಯು ನಾಟ್ಯ ಭಂಗಿಯಲ್ಲಿ ನಿಂತಿದ್ದು, ದೇವಿಯನ್ನು ಹಳದಿ ಬಣ್ಣದಿಂದ ಚಿತ್ರಿಸಲಾಗಿದೆ. ಆಕೆಯು ಕೆಂಪು ರವಿಕೆ ಮತ್ತು ಹಸಿರು ಸೀರೆಯನ್ನು ಧರಿಸಿದ್ದಾಳೆ. ಎರಡು ಕೈಗಳನ್ನು ಮೇಲೆ ಎತ್ತಿ ಕೈಯಲ್ಲಿ ಮಾಲೆಯನ್ನು ಹಿಡಿದಿದ್ದಾಳೆ. ಅವಳ ಬೆನ್ನ ಹಿಂದೆ ಎರಡು ರೆಕ್ಕೆಗಳಿ ಇವೆ. ಎರಡು ಜಡೆಯನ್ನು ಹಾಕಿಕೊಂಡಿದ್ದಾಳೆ. ಕಲಾವಿದನು ಕಪ್ಪು ಮತ್ತು ಕೆಂಪು ಬಣ್ಣ ಮಿಶ್ರಿತ ಹೊರ ರೇಖೆಯನ್ನು ಎಳೆದಿದ್ದಾನೆ. ಆಕೆಯ ಬಲ ಮತ್ತು ಎಡಭಾಗದಲ್ಲಿ ಎರಡು ಜಿಂಕೆಗಳು ಒಂದೊಂದು ಕಾಲನ್ನು ಎತ್ತಿ ನಿಂತಿರುವುದನ್ನು ಗಮನಿಸಬಹುದು. ಈ ಕಲಾಕೃತಿಯ ಹಿನ್ನೆಲೆಯಲ್ಲಿ ಬಿಳಿಯ ಗೋಡೆಯ ಮೇಲೆ ಹೂಬಳ್ಳಿಗಳ ವಿನ್ಯಾಸದ ನಕ್ಷೆಯನ್ನು ಬಂಗಾರದ ಬಣ್ಣದಿಂದ ರಚಿಸಲಾಗಿದೆ. ಜಿಂಕೆಗಳಿಗೆ ನಸುಗೆಂಪು ಮತ್ತು ಹಳದಿ ಬಣ್ಣವಿದೆ. ಈ ಕಲಾಕೃತಿಗಳಿಗೆ ನಿರ್ದಿಷ್ಟವಾದ ಅಳತೆ ಮತ್ತು ಪ್ರಮಾಣವು ಕಂಡುಬರುವುದಿಲ್ಲ. ನೀಲಿ ಬಣ್ಣದ ಗಿಡವನ್ನು ರಚಿಸಲಾಗಿದೆ. ಈ ಕಲಾಕೃತಿಯು ದೊಡ್ಡ ಗಾತ್ರದಲ್ಲಿದೆ.

### ೯. ಕರ್ಣಾರ್ಜುನರ ಯುದ್ಧದ ದೃಶ್ಯ

ಈ ಕಲಾಕೃತಿಯಲ್ಲಿ ಕಲಾವಿದನು ಕರ್ಣಾರ್ಜುನರ ಯುದ್ಧದ ಸನ್ನಿವೇಶವನ್ನು ಚಿತ್ರಿಸಿದ್ದಾನೆ. ಖಾಜನಗೌಡರ ಮನೆಯೊಳಗಿನ ಬಹುದೊಡ್ಡ ಮತ್ತು ವಿಶೇಷ ಕಲಾಕೃತಿಯಲ್ಲಿ ಇದು ಒಂದು. ರಣರಂಗದ ಇಕ್ಕಲೆಗಳಲ್ಲಿ ಕರ್ಣಾರ್ಜುನರ ರಥಗಳು ಎದುರು-ಬದುರು ನಿಂತುಕೊಂಡಿವೆ. ಕರ್ಣನಿಗೆ ಶಲ್ಯ ಸಾರಥಿಯಾಗಿರುವಂತೆ, ಅರ್ಜುನನಿಗೆ ಶ್ರೀಕೃಷ್ಣನೇ ಸಾರಥಿಯಾಗಿ ರಥ ನಡೆಸುತ್ತಿದ್ದಾನೆ. ಅರ್ಜುನನ ಮೈಬಣ್ಣವು ಹಳದಿ, ಹಸಿರು ಮತ್ತು ಕೆಂಪು ಬಣ್ಣಗಳ ವಸ್ತ್ರ ಧರಿಸಿದ್ದಾನೆ. ಅಲಂಕಾರಿಕ ವಿನ್ಯಾಸಕ್ಕಾಗಿ ರೇಖೆಗಳನ್ನು ಎಳೆಯಲಾಗಿದೆ. ಅರ್ಜುನನ ರಥದ ಮೇಲಿರುವ ಧ್ವಜದಲ್ಲಿ ಹನುಮಂತನಿದ್ದು, ಕೆಂಪು ವರ್ಣದಿಂದ ಚಿತ್ರಿಸಲಾಗಿದೆ. ಅರ್ಜುನನ ಸಾರಥಿಯಾಗಿ ಕುಳಿತ ಕೃಷ್ಣನನ್ನು ನೀಲಿ ವರ್ಣಗಳಿಂದ ಚಿತ್ರಿಸಿದ್ದು, ಅವನು ಕೆಂಪು ಮತ್ತು ಪಾಚಿ ಹಸಿರು ಬಣ್ಣದ ಉಡುಪನ್ನು ಧರಿಸಿದ್ದಾನೆ. ಅವನ ಮೈ ಮೇಲೆ ಅಲಂಕೃತವಾದ ಆಭರಣಗಳು ಕಂಡುಬರುತ್ತವೆ. ಕೃಷ್ಣನು ಕೈಯಲ್ಲಿ ಚಾಟಿಯನ್ನು ಹಿಡಿದು

ಸಾರಥಿಯಾಗಿ ಕುಳಿತಿದ್ದಾನೆ. ಇಲ್ಲಿ ಎರಡು ಕುದುರೆಗಳಿವೆ. ಅವುಗಳ ಮೈ ಬಣ್ಣವು ನೀಲಿಯಾಗಿ ಚಿತ್ರಿಸಲ್ಪಟ್ಟಿವೆ.

ಸೂರ್ಯ ಪುತ್ರನಾದ ಕರ್ಣನ ಮೈ ಬಣ್ಣವು ನೀಲಿ ಮಿಶ್ರಿತ ಬಿಳಿಯ ಬಣ್ಣವಾಗಿದೆ. ಅಲಂಕಾರಿಕವಾದ ಆಭರಣವನ್ನು ಧರಿಸಿದ್ದಾನೆ. ಕೆಂಪು ವಸ್ತ್ರವನ್ನು ಲೇಪಿಸಿದ್ದಾನೆ. ಎಡಭುಜಕ್ಕೆ ಬಿಲ್ಲು ಹೆಡೆ ಏರಿಸಿಕೊಂಡು ರಥದಲ್ಲಿ ಕುಳಿತಿದ್ದಾನೆ. ಇವನ ಸಾರಥಿಯಾಗಿ ಶಲ್ಯ ಹಳದಿ ಬಣ್ಣದಲ್ಲಿದ್ದಾನೆ. ಮತ್ತು ಕುದುರೆಗಳ ಮೈ ಬಣ್ಣವು ಸಹಿತ ಹಳದಿ ಬಣ್ಣದಿಂದ ಕೂಡಿದೆ. ರಥವನ್ನು ಹಳದಿ ಬಣ್ಣದಿಂದ ರಚಿಸಲಾಗಿದೆ. ಕಪ್ಪು ಬಣ್ಣದ ರೇಖೆಗಳನ್ನು ಅಲಂಕಾರಿಕ ವಿನ್ಯಾಸಕ್ಕಾಗಿ ಕಲಾವಿದನು ಬಳಸಿಕೊಂಡಿದ್ದಾನೆ. ಕರ್ಣನ ಧ್ವಜದಲ್ಲಿ ಪಕ್ಷಿಯೊಂದಿದೆ. ಧ್ವಜಕ್ಕೆ ಕೆಂಪು ಮತ್ತು ಹಳದಿ ವರ್ಣವಿದ್ದು, ಕಪ್ಪು ಬಣ್ಣದ ರೇಖೆಗಳನ್ನು ಎಳೆಯಲಾಗಿದೆ. ಈ ಕಲಾಕೃತಿಯ ಸುತ್ತಲೂ ಕೆಂಪು ಹೂಗಳು, ಹಸಿರು ಬಣ್ಣದ ಬಳ್ಳಿಗಳನ್ನು ಪಟ್ಟಿಯಲ್ಲಿ ನಕ್ಷೆಯ ವಿನ್ಯಾಸಕ್ಕಾಗಿ ಚಿತ್ರಿಸಿಕೊಳ್ಳಲಾಗಿದೆ.

**೧೦. ಹಂಸ ಪಕ್ಷಿ**

ಈ ಕಲಾಕೃತಿಯನ್ನು ಅಲಂಕಾರಿಕವಾಗಿ ಚಿತ್ರಿಸಲಾಗಿದೆ. ಹಂಸ ಪಕ್ಷಿಯ ದೇಹವನ್ನು ಬಿಳಿಯ ವರ್ಣದಿಂದ ರಚಿಸಲಾಗಿದೆ. ಅದರ ಕೊಕ್ಕೆ ಮತ್ತು ರೆಕ್ಕೆಗಳು ಹಳದಿ ಬಣ್ಣದಿಂದ ಲೇಪನಗೊಂಡಿವೆ. ಹಂಸದ ಕೊರಳಲ್ಲಿ ಹಳದಿ ಬಣ್ಣದ ಆಭರಣಗಳನ್ನು ಕಪ್ಪು ಬಣ್ಣದಿಂದ ರೇಖೆಗಳಿಂದ ರಚಿಸಲಾಗಿದೆ. ಹಂಸದ ಎಡಭಾಗದಲ್ಲಿ ಹೂಬಳ್ಳಿಗಳನ್ನು ಚಿತ್ರಿಸಿರುವ ದೃಶ್ಯವನ್ನು ನೋಡಬಹುದು. ಉಳಿದ ಭಾಗವು ಹಸುವಿನ ರೂಪದಲ್ಲಿದೆ. ಮುಖಭಾಗದಲ್ಲಿನ ಕಣ್ಣುಗಳನ್ನು ಕೆಂಪು ಬಣ್ಣದಿಂದ ಚಿತ್ರಿಸಲಾಗಿದೆ. ಅದರ ಕಿವಿಗಳಿಗೆ ಆಭರಣಗಳಿಂದ ಅಲಂಕರಿಸಲಾಗಿದೆ. ಕಾಮದೇನುವಿನ ಕುತ್ತಿಗೆಯಲ್ಲಿ ಕಪ್ಪು ಬಣ್ಣಗಳಿಂದ ರೇಖಾ ವಿನ್ಯಾಸದ ಆಭರಣಗಳನ್ನು ಚಿತ್ರಿಸಲಾಗಿದೆ.

ಇವುಗಳಿಗೆ ಎರಡು ಕಪ್ಪು ಬಣ್ಣದ ಜಡೆಯನ್ನು ರಚಿಸಲಾಗಿದೆ. ಮತ್ತು ಪಕ್ಕದಲ್ಲಿ ಎರಡು ರೆಕ್ಕೆಗಳಿದ್ದು, ಅವುಗಳಿಗೆ ಹಸಿರು ಮತ್ತು ಹಳದಿ ಬಣ್ಣಗಳ ಲೇಪವನಿದೆ. ಹಾಗೂ ಕಪ್ಪು ರೇಖೆಗಳನ್ನು ಎಳೆಯಲಾಗಿದೆ. ಇದರ ಮೇಲ್ಭಾಗದಲ್ಲಿ ಕೆಂಪು, ಹಳದಿ, ಹಸಿರು ಬಣ್ಣದ ವಸ್ತ್ರವನ್ನು ರಚಿಸಲಾಗಿದೆ. ಇದರ ಬಾಲವು ನವಿಲಿನ ಪುಕ್ಕೆಗಳಿಂದ ಕೂಡಿದೆ. ಪಕ್ಕದಲ್ಲಿ ನೀಲಿ ಬಣ್ಣದಿಂದ ಅಲಂಕಾರಿಕವಾಗಿ ಹೂದಾನಿಯಲ್ಲಿ ಹಸಿರು ಎಲೆಗಳು ಮತ್ತು ಕೆಂಪು ಬಣ್ಣದ ಹೂಗಳನ್ನು ಚಿತ್ರಿಸಲಾಗಿದೆ. ಎಲೆ ಮತ್ತು ಹೂಗಳು ಸ್ಪಷ್ಟವಾಗಿ ನೈಜತೆಯಿಂದ ಕೂಡಿವೆ. ಕೆಳಗೆ ನೀಲಿ ಬಣ್ಣದಿಂದ ಉದ್ದನೆ ಪಟ್ಟಿಯಾಕಾರವಾಗಿ ರೇಖೆಗಳನ್ನು ಎಳೆಯಲಾಗಿದೆ.

### ೧೧. ಗೋಪಿಕಾ ಸ್ತ್ರೀಯ ಚಿತ್ರ

ಈ ಕಲಾಕೃತಿಯಲ್ಲಿ ರಚಿಸಲ್ಪಟ್ಟ ಗೋಪಿಕಾ ಸ್ತ್ರೀಯು ಮರದ ಟೊಂಗೆಯನ್ನು ಹಿಡಿದು ನಿಂತಿದ್ದಾಳೆ. ಹಿನ್ನೆಲೆಯು ಬಿಳಿಯ ಬಣ್ಣವಾಗಿದೆ. ಅವಳ ಮೈಬಣ್ಣವು ಹಳದಿ ಬಣ್ಣದಿಂದ ಕೂಡಿದೆ. ದುಂಡನೆಯ ಮುಖವನ್ನು ಹೊಂದಿದ್ದಾಳೆ. ಪಾಚಿ ಹಸಿರು ಬಣ್ಣದ ರವಿಕೆಯನ್ನು ಕೆಂಪು ಬಣ್ಣದ ಸೀರೆಯನ್ನು ತೊಟ್ಟಿದ್ದಾಳೆ. ಕಲಾವಿದನು ಇವಳ ಮೈ ಮೇಲೆ ಇರುವ ಆಭರಣಗಳನ್ನು ಕಪ್ಪು ಬಣ್ಣದ ರೇಖೆಗಳಿಂದ ರಚಿಸಲಾಗಿದೆ. ಅವಳ ಕಿವಿಗಳು ಆಭರಣದಿಂದ ಮುಚ್ಚಿ ಹೋಗಿವೆ. ಎಡಗೈಯಲ್ಲಿ ಮರದ ಕೊಂಬೆಯನ್ನು ಹಿಡಿದಿದ್ದಾಳೆ. ಉದ್ದನೆಯ ಜಡೆಯನ್ನು ಹೊಂದಿದ್ದಾಳೆ. ಅವಳ ಹಿಂದಿರುವ ಮರವನ್ನು ಹಸಿರು ವರ್ಣದಿಂದ ಮತ್ತು ನಸುಗೆಂಪು ವರ್ಣದಿಂದ ಟೊಂಗೆಗಳನ್ನು ಚಿತ್ರಿಸಲಾಗಿದೆ. ಮರದ ಎಲೆಗಳು, ಟೊಂಗೆಗಳ ಭಾಗಗಳು ಅಲ್ಪ-ಸ್ವಲ್ಪ ಉಳಿದಿವೆ. ಹೆಚ್ಚಿನ ಭಾಗದಲ್ಲಿ ಬಣ್ಣಗಳು ಉದುರಿ ಹಾಳಾಗಿವೆ.

### ೧೨. ಆಲದ ಎಲೆಯ ಮೇಲೆ ಪವಡಿಸಿದ ಕೃಷ್ಣ



ಈ ಚಿತ್ರದಲ್ಲಿ ಕೃಷ್ಣನು ಆಲದ ಎಲೆಯ ಮೇಲೆ ಮಲಗಿಕೊಂಡು ಆಡುತ್ತಿರುವ ದೃಶ್ಯವಿದೆ. ಕೃಷ್ಣನು ಬಲಗಾಲನ್ನು ಬಾಯಿಯಲ್ಲಿ ಇಟ್ಟುಕೊಂಡು, ಎಡಗಾಲನ್ನು ಚಾಚಿಕೊಂಡು ಆಟವಾಡುತ್ತಿದ್ದಾನೆ. ಇದು ಬಾಲ ಕೃಷ್ಣನ ಲೀಲೆಗಳನ್ನು ತೋರಿಸುವ ಒಂದು ಚಿತ್ರವಾಗಿದೆ. ಆಲದ ಎಲೆಯ ನೀರಿನಲ್ಲಿ ತೇಲುತ್ತಿದೆ ಎಂಬುದನ್ನು ತೋರಿಸಲು ಹಿನ್ನೆಲೆಯಲ್ಲಿ ಆಯಾಕಾರವನ್ನು ಸೃಷ್ಟಿಸಿ ಅದರಲ್ಲಿ ಮೀನು, ಏಡಿ, ಕಪ್ಪೆ ಮುಂತಾದ ಜಲಚರಗಳನ್ನು ರೇಖಾ ಹಿನ್ನೆಲೆಯಲ್ಲಿ ರಚಿಸಿದ್ದಾರೆ.

ಕೃಷ್ಣನು ನೀಲಿ ಬಣ್ಣದ ಮೈ ಬಣ್ಣ ಹೊಂದಿದ್ದು ಹಣೆ, ಕೈ ಮತ್ತು ಮೈ ಮೇಲೆ ನಾಮ ಲೇಪಿಸಿಕೊಂಡಿದ್ದಾನೆ. ಎಡ ಮತ್ತು ಬಲಭಾಗದಲ್ಲಿ ಇಬ್ಬರು ಸ್ತ್ರೀಯರಿದ್ದಾರೆ. ಬಲಭಾಗದಲ್ಲಿ ಇರುವ ಮಹಿಳೆ ಚಾಮರ ಬೀಸುತ್ತಿದ್ದು, ಹಸಿರು ಸೀರೆ, ಕೆಂಪು ಕುಪ್ಪಸ ಧರಿಸಿದ್ದಾಳೆ. ಎಡಭಾಗದ ಮಹಿಳೆ ಆರತಿಯನ್ನು ಹಿಡಿದುಕೊಂಡಿದ್ದಾಳೆ. ಇವಳು ಕೆಂಪು ಸೀರೆ, ಹಸಿರು ಕುಪ್ಪಸ ಧರಿಸಿದ್ದಾಳೆ.

### ೧೩. ಜಿಂಕೆಗೆ ಎಲೆಯನ್ನು ತಿನ್ನಿಸುತ್ತಿರುವ ಮಹಿಳೆ

ಈ ಚಿತ್ರದಲ್ಲಿ ಮಹಿಳೆಯೊಬ್ಬಳು ಗಿಡದಿಂದ ಎಲೆಯನ್ನು ಕಿತ್ತು ಜಿಂಕೆಗೆ ತಿನ್ನಿಸುತ್ತಿದ್ದಾಳೆ. ಬಲಗೈಯಿಂದ ಗಿಡದ ಖಾಂಡವನ್ನು ಕಿಳುತ್ತಿದ್ದು, ಎಡಗೈಯಿಂದ ಎಲೆ ತಿನ್ನಿಸುತ್ತಿದ್ದಾಳೆ. ಕಾಲುಗಳನ್ನು ಕತ್ತರಿಯ ವಿನ್ಯಾಸದಲ್ಲಿ ಇಟ್ಟುಕೊಂಡಿದ್ದು, ವೈಯಾರದ ಭಾವನೆ ತೋರುತ್ತದೆ. ಜಿಂಕೆಯ ಮರಿಯು

ತಾಯಿಯ ಮೊಲೆ ಹಾಲನ್ನು ಕುಡಿಯುತ್ತಿರುವುದು ಇಲ್ಲಿ ಕಂಡುಬರುತ್ತದೆ. ಮಹಿಳೆಯು ಸರ್ವಾಲಾಂಕಾರ ಭೂಶೀತೆಯಾಗಿದ್ದಾಳೆ. ಉತ್ತರ ಕರ್ನಾಟಕದ ವೇಷಭೂಷಣಗಳು ಇಲ್ಲಿ ಕಂಡುಬರುತ್ತವೆ. ಹಸಿರು, ಕೆಂಪು, ಹಳದಿ ವರ್ಣಗಳು ಪ್ರಮುಖವಾಗಿ ಬಳಕೆಗೊಂಡಿವೆ.

### ೧೪. ಮನೆಯ ವಂಶಸ್ಥರ ಚಿತ್ರ

ಈ ಚಿತ್ರವು ಕೋಣೆಯ ಗೋಡೆಯ ಮೇಲೆ ಮೂಲೆಯಲ್ಲಿ ಬರುತ್ತದೆ. ಇಲ್ಲಿ ವ್ಯಕ್ತಿಯೊಬ್ಬನು ರಾಜ ಠೀವಿಯಿಂದ ನಿಂತುಕೊಂಡಿದ್ದು, ಗುಲಾಬಿ ಹೂವನ್ನು ಮೂಸಿಸುತ್ತಿದ್ದಾನೆ. ಎಡಗೈಯಲ್ಲಿ ಕತ್ತಿಯು ಕಂಡುಬರುತ್ತದೆ. ತಲೆಗೆ ಧರಿಸಿರುವ ಪೇಠ ರಾಜಗಂಭೀರ್ಯದ ನೀಲುವಂಗಿ, ಸೊಂಟಕ್ಕೆ ಕಟ್ಟಿರುವ ಉತ್ತರಿಯ ಮುಂತಾದವುಗಳು ಆಕರ್ಷಕವಾಗಿದೆ. ಖಾಜನಗೌಡರ ಮನೆಯ ವಂಶಸ್ಥರ ಚಿತ್ರ ಇದಾಗಿದ್ದು ಅಂದಿನ ಸ್ಥಿತಿ–ಗತಿಗಳನ್ನು ಬಿಂಬಿಸುತ್ತದೆ. ಈ ಚಿತ್ರದಲ್ಲಿ ವ್ಯಕ್ತಿಯು ಹಳದಿ ಬಣ್ಣದ ಲೇಪನದಿಂದ ಚಿತ್ರಿಸಲ್ಪಟ್ಟಿದ್ದಾನೆ. ಆತನ ನಿಲುವಾಗಿ ಹಸಿರು ಬಣ್ಣದ್ದಾಗಿದೆ. ಕಾಲಿನ ಬೂಟುಗಳು ತಲೆಯಮೇಲಿನ ಪೇಠ ಕೆಂಪು ಬಣ್ಣದ ಲೇಪನ ಹೊಂದಿದೆ. ಪಕ್ಕದಲ್ಲಿ ೧೮೨೮ ಎಂಬ ಇಸ್ವಿ ಇರುವ ವರ್ಷವನ್ನು ಬರೆಯಲಾಗಿದ್ದು,ಚಿತ್ರದ ಕಾಲಘಟವನ್ನು ಇದು ನಿರ್ಧರಿಸುತ್ತದೆ.

### ೧೫. ಕಮಾನಿನ ಮೇಲೆ ಹೂ–ಬಳ್ಳಿಯ ಅಲಂಕಾರ

ಖಾಜನಗೌಡರ ಮನೆಯ ಒಳಭಾಗದ ದೊಡ್ಡ ಹಜರವೊಂದು ಸಭಾಂಗಣದಂತೆ ಕಂಡುಬರುತ್ತದೆ. ಇಲ್ಲಿ ಸಭೆ ನಡೆಯುವ ಸ್ಥಳವನ್ನು ಎತ್ತರವಾಗಿ ನಿರ್ಮಿಸಲಾಗಿದ್ದು, ಅದಕ್ಕೆ ಕಮನಿನ ಅಲಂಕಾರ ಮಾಡಲಾಗಿದೆ. ಈ ಕಮಾನುಗಳಲ್ಲಿ ಪ್ರತಿಯೊಂದು ಗೋಡೆಗಳನ್ನು ಹೂಬಳ್ಳಿಯ ಅಲಂಕಾರದಿಂದ ಚಿತ್ರಿಸಲಾಗಿದೆ. ಕಮಾನಿನ ಅಂಚನ್ನು ಕೆಂಪು ಬಣ್ಣದ ಹೂಗಳು ಮತ್ತು ಹಸಿರು ಎಲೆಗಳನ್ನು ಇದರ ಮೇಲೆ ಚಿತ್ರಿಸಲಾಗಿದ್ದರೆ ಒಳಭಾಗದ ಗೋಡೆಯನ್ನು ನೀಲಿ ಬಣ್ಣದ ಎಲೆಗಳು ಕೆಂಪು ಹೂಗಳಿಂದ ಚಿತ್ರಿಸಲಾಗಿದೆ. ಈ ಹೂಬಳ್ಳಿಯ ನಕ್ಷೆಗಳಲ್ಲಿ ಶೈಲಿಕೃತವಾದ ನೈಜತೆ ಕಂಡುಬರುತ್ತವೆ. ಅನೇಕ ಕಡೆಗಳಲ್ಲಿ ಹೂ ಮತ್ತು ಬಳ್ಳಿಗಳನ್ನು ಪುನರಾವರ್ತನೆ ಮಾಡಲಾಗಿದೆ.

### ೧೬. ಅಲಂಕಾರಿಕ ಹೂಕುಂಡಲ ಮತ್ತು ಕಾಮಧೇನು

ಅನೇಕ ಚಿತ್ರದ ಮಧ್ಯಭಾಗದ ಖಾಲಿ ಸ್ಥಳ ಮತ್ತು ಮೂಲೆಯಲ್ಲಿ ಉಳಿದುಕೊಂಡಿರುವ ಖಾಲಿ ಸ್ಥಳಗಳನ್ನು ತುಂಬಲು ಅಲಂಕಾರಿಕ ಹೂ ಕುಂಡಗಳನ್ನು ಚಿತ್ರಿಸಿದ್ದಾರೆ. ಇವುಗಳು ಒಂದಕ್ಕಿಂತ ಒಂದು ಭಿನ್ನವಾಗಿವೆ. ಮಧ್ಯದಲ್ಲಿ ಹೂವಿನ ಕುಂಡಗಳನ್ನು ಚಿತ್ರಿಸಿ ಅದರಲ್ಲಿ ಹೂವಿನ ಗಿಡಗಳು ವಿವಿಧ

ರೀತಿಯ ಹೂಗಳನ್ನು ರಚನೆ ಮಾಡಲಾಗಿದೆ. ಅಲ್ಲದೇ ಹೂವಿನ ಗಿಡಗಳಲ್ಲಿ ವಿವಿಧ ವಿನ್ಯಾಸದಲ್ಲಿ ಗಿಳಿಗಳನ್ನು ಚಿತ್ರಿಸಲಾಗಿದೆ. ಕೆಲವು ಹೂಕುಂಡಗಳ ಎಡಬಲದಲ್ಲಿ ಜಿಂಕೆಗಳನ್ನು ಚಿತ್ರಿಸಿದ್ದಾರೆ. ಮತ್ತೆ ಕೆಲವು ಹೂಕುಂಡಗಳಲ್ಲಿ ಕಾಮಧೇನುಗಳನ್ನು ಎರಡು ಕಡೆಗೆ ಚಿತ್ರಿಸಲಾಗಿದೆ. ಅಂತಹ ಒಂದು ಚಿತ್ರವು ಇಲ್ಲಿ ಕಂಡುಬರುತ್ತದೆ. ಈ ಚಿತ್ರದಲ್ಲಿ ನೀಲಿ ಬಣ್ಣದಲ್ಲಿ ರಚನೆಯಾಗಿರುವ ಹೂವಿನ ಕುಂಡವಿದೆ. ಎಡ-ಬಲದಲ್ಲಿ ಸ್ತ್ರೀ ಮುಖದ ಪಶುದೇಹದ ರೇಖೆಗಳನ್ನು ಹೊಂದಿದ ಕಾಮಧೇನುಗಳನ್ನು ಚಿತ್ರಿಸಲಾಗಿದೆ. ಕಾಮಧೇನುವಿನ ಬಾಲಗಳನ್ನು ನವಿಲಿನ ಬಾಲದಂತೆ ಚಿತ್ರಿಸಿದ್ದಾರೆ. ಮಹಿಳೆಯರ ಎರಡು ಜಡೆಗಳನ್ನು ಇಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಮೇಲ್ಭಾಗದಲ್ಲಿ ಇರುವ ಗಿಡದಲ್ಲಿ ಹಸಿರು ಎಲೆಗಳು ಕೆಂಪು ಮತ್ತು ನೀಲಿ ಬಣ್ಣದ ಹೂಗಳು ಅರಳಿಕೊಂಡಿವೆ. ಗಿಳಿಗಳು ಗಿಡದಲ್ಲಿ ಕುಳಿತುಕೊಂಡಿದ್ದು ಇವುಗಳಿಂದ ಚಿತ್ರದ ಅಂದ ಹೆಚ್ಚಿದೆ.

### ೧೭. ಗಂಧರ್ವರ ಶಾಪ ವಿಮೋಚನೆ

ಈ ಚಿತ್ರದಲ್ಲಿ ಕೃಷ್ಣನು ಗಂಧರ್ವರ ಶಾಪವಿಮೋಚನೆ ಮಾಡುತ್ತಿರುವುದು ಕಂಡುಬರುತ್ತದೆ. ಇಬ್ಬರು ಗಂಧರ್ವರು ಋಷಿಮುನಿಗಳ ಶಾಪದಿಂದ ವೃಷಿಗಳಾಗಿ ಮಾರ್ಪಾಡುಗೊಂಡಿರುತ್ತಾರೆ. ಅವರಿಗೆ ಕೃಷ್ಣನ ಸ್ಪರ್ಷದಿಂದ ಶಾಪವಿಮೋಚನೆ ಇರುತ್ತದೆ. ಈ ಚಿತ್ರದಲ್ಲಿ ಬಾಲಕ ಕೃಷ್ಣನು ಕಲ್ಲಿನ ವರಳನ್ನು ಹಗ್ಗದೊಂದಿಗೆ ಎಳೆದುಕೊಂಡು ಬಂದು ಗಿಡದ ಸಂದಿಯಲ್ಲಿ ತೋರಿಸಿಕೊಂಡು ಹೋಗುತ್ತಾನೆ. ಇದರಿಂದಾಗಿ ಈ ಎರಡು ಗಿಡಗಳು ನೆಲಕ್ಕೆ ಬೀಳುತ್ತವೆ. ಇದರಿಂದ ವೃಕ್ಷ ರೂಪದಲ್ಲಿ ಇದ್ದ ಗಂಧರ್ವರು ಶಾಪ ವಿಮೋಚನೆಗೊಂಡು ಮತ್ತೆ ತಮ್ಮ ರೂಪಕ್ಕೆ ತೆರಳುತ್ತಾರೆ. ಈ ಚಿತ್ರದಲ್ಲಿ ತಾಯಿ ಯಶೋಧೆ ಕಟ್ಟಿದ ವರಳಿನ ಸಮೇತ ಕೃಷ್ಣನು ಓಡುತ್ತಿದ್ದಾನೆ. ವೃಷದ ಪಕ್ಕದಲ್ಲಿ ನಾರದ ಮಹರ್ಷಿ ಮೀಣೆ ಬಾರಿಸುತ್ತಾ ನಿಂತಿದ್ದಾನೆ. ಎರಡು ಜೋಡಿ ವೃಷಗಳು ಸಮಾನಾಂತರದಲ್ಲಿ ಇದ್ದು, ಅವುಗಳ ಮೇಲ್ಭಾಗದಲ್ಲಿ ಗಂಧರ್ವರನ್ನು ಚಿತ್ರಿಸಲಾಗಿದೆ. ಹಳದಿ, ನೀಲಿ, ಕೆಂಪು, ಕಪ್ಪು, ತೀಳಿ ಹಸಿರು ಮುಂತಾದ ಬಣ್ಣಗಳು ಇಲ್ಲಿ ಪ್ರಮುಖವಾಗಿ ಬಳಕೆಗೊಂಡಿವೆ.

### ೧೮. ವೀಣೆ ನುಡಿಸುತ್ತಿರುವ ಮಹಿಳೆ

ಈ ಚಿತ್ರದಲ್ಲಿ ಮಹಿಳೆಯೊಬ್ಬಳು ಅಲಂಕಾರ ಭೂಷಿತೆಯಾಗಿ ವೀಣೆಯನ್ನು ನುಡಿಸುತ್ತಿದ್ದಾಳೆ. ಕೊರಳಲ್ಲಿ ವೀಣೆಯನ್ನು ಹಾಕಿಕೊಂಡು ಬಲಗೈಯಿಂದ ತಂತಿಯನ್ನು ಮೀಟುತ್ತಿದ್ದು, ಎಡಗೈಯಲ್ಲಿ "ಚಿಟಿಕೆ ತಾಳವನ್ನು" ಬಾರಿಸುತ್ತಿದ್ದಾಳೆ. ಈ ಸಂದರ್ಭವು ದಾಸ ಪರಂಪರೆಯನ್ನು ನೆನಪಿಸುವಂತಿದೆ. ಮಹಿಳೆಯ ಎದುರಿಗೆ ಬೃಹತಾದ ಜಿಂಕೆಯೊಂದು ಆಕೆಯ ನೃತ್ಯ ಮತ್ತು ಭಜನೆಗೆ ಕುಣಿಸುತ್ತಿರುವಂತೆ

ಚಿತ್ರಿಸಲಾಗಿದೆ. ಹಳದಿ ಬಣ್ಣದ ಜಿಂಕೆಯು ಮುಂಗಾಲನ್ನು ಮೇಲೆತ್ತಿ ಆಕರ್ಷಕವಾಗಿ ಚಿತ್ರಿಸಲ್ಪಟ್ಟಿದೆ. ಮಹಿಳೆಯ ಹಿಂಭಾಗದಲ್ಲಿ ಎತ್ತರವಾದ ಬಾಳೆಯ ಗಿಡವನ್ನು ರಚಿಸಿದ್ದಾರೆ. ಬಾಳೆಯ ಎಲೆಗಳು, ಹಣ್ಣುಗಳು, ಬೀಜಗಳು ಅಲಂಕಾರಿಕವಾಗಿ ಚಿತ್ರಿಸಲ್ಪಟ್ಟಿವೆ.

**೧೯. ಧ್ವಜವನ್ನು ಹಿಡಿದ ಮನುಷ್ಯಕಾರಗಳು**

ಈ ಚಿತ್ರವು ಕೀಟಕಿಯ ಕಮಾನಿನ ಮೇಲ್ಭಾಗದಲ್ಲಿದೆ. ಇಲ್ಲಿ ಎಡ–ಬಲದಲ್ಲಿ ಎರಡು ಮನುಷ್ಯಕಾರಿಗಳು ಕೈಯಲ್ಲಿ ಧ್ವಜವನ್ನು ಹಿಡಿದು ಮುಂದಕ್ಕೆ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಎರಡು ಚಿತ್ರಗಳು ಬಹುಮಟ್ಟಿಗೆ ಒಂದೇ ರೀತಿಯ ವಿನ್ಯಾಸದಲ್ಲಿ ಕಂಡುಬರುತ್ತವೆ. ಭುಜದಲ್ಲಿ ರೇಖೆಗಳನ್ನು ಚಿತ್ರಿಸಲಾಗಿದೆ. ತಲೆಯ ಮೇಲೆ ಕೆಂಪು ಬಣ್ಣದ ಟೋಪ್ಪಿಗೆ ಇದೆ. ನೀಲಿ ಬಣ್ಣದ ಅಂಗಿ, ನಸುಗೆಂಪು ಬಣ್ಣದ ಪ್ಯಾಂಟನ್ನು ಚಿತ್ರಿಸಲಾಗಿದೆ. ಈ ಚಿತ್ರವು ಬ್ರಿಟಿಷ್ ಪ್ರಭಾವವನ್ನು ತೋರಿಸಿಕೊಡುತ್ತದೆ. ಕೆಳಭಾಗದಲ್ಲಿ ಮತ್ತು ಮೇಲ್ಭಾಗದಲ್ಲಿ ಹೂವಿನ ಬಳ್ಳಿಗಳನ್ನು ಚಿತ್ರಿಸಲಾಗಿದೆ.

**೨೦. ನಿಂತ ಮಹಿಳೆ ಚಿತ್ರ**

ಬಾಗಿಲಿನ ಒಂದು ಬದಿಯಲ್ಲಿ ಈ ಚಿತ್ರವು ಕಂಡುಬರುತ್ತದೆ. ಇಲ್ಲಿ ಮಹಿಳೆಯನ್ನು ಬೃಹ್ ಆಕಾರದಲ್ಲಿ ಚಿತ್ರಿಸಲಾಗಿದೆ. ಮಹಿಳೆಯು ಒಂದು ಅಲಂಕಾರಿಕ ಪೀಠದ ಮೇಲೆ ನಿಂತುಕೊಂಡಿದ್ದಾಳೆ. ತನ್ನ ಎಡಗೈಯನ್ನು ಗದ್ದದ ಮೇಲೆ ಇಟ್ಟುಕೊಂಡಿದ್ದು, ಬಲಗೈಯಿಂದ ಸೊಂಟವನ್ನು ಸ್ಪರ್ಶಿಸಿದ್ದಾಳೆ. ಹಸಿರು ಕುಪ್ಪಸ, ಕೆಂಪು ಸೀರೆಗಳು ಕಂಡುಬರುತ್ತದೆ. ಕಿವಿ. ಮೂಗು, ಕೊರಳು, ತೋಳುಗಳು ಮತ್ತು ಕಾಲುಗಳಲ್ಲಿ ಮಾತ್ರವಲ್ಲದೆ ತಲೆಯಲ್ಲಿ ವಿವಿಧ ರೀತಿಯ ಆಭರಣಗಳಿವೆ. ಪ್ರಮಾಣಬದ್ಧತೆಯ ದೃಷ್ಟಿಯಿಂದ ಈ ಚಿತ್ರವು ಅಷ್ಟೊಂದು ಪರಿಣಾಮಕಾರಿಯಾಗಿರದಿದ್ದರು ಆ ಕಾಲದ ವೇಷಭೂಷಣ ಮತ್ತು ವ್ಯಕ್ತಿತ್ವಗಳನ್ನು ತಿಳಿದುಕೊಡುತ್ತದೆ.

**೨೧. ಆಂಜನೇಯನ ಚಿತ್ರ**

ಈ ಕಲಾಕೃತಿಯಲ್ಲಿ ಹನುಮಂತನು ನಿಂತಿರುವಂತೆ ಚಿತ್ರಿಸಲಾಗಿದೆ. ಅವನ ಮೈಬಣ್ಣವು ಹಸಿರು ಬಣ್ಣವಾಗಿದೆ. ತಲೆಯ ಕೂದಲು ಕಪ್ಪು ವರ್ಣವಾಗಿದ್ದು, ಅವನ ಮುಖವು ಕೆಂಪು ಬಣ್ಣದಿಂದ ಕೂಡಿದೆ. ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಿದ್ದಾನೆ. ಅವನಿಗೆ ಅಲಂಕಾರಕ್ಕಾಗಿ ಆಭರಣಗಳನ್ನು ಹಳದಿ ಮತ್ತು ಕಪ್ಪು ವರ್ಣದಿಂದ ಚಿತ್ರಿಸಲಾಗಿದೆ. ಹನುಮಂತನ ಕಲಾಕೃತಿಯಲ್ಲಿ ಅಲ್ಲಲ್ಲಿ ಬಣ್ಣಗಳು ಉದುರಿ ಬಿದ್ದು ಹಾಳಾಗಿರುವುದನ್ನು ನೋಡಬಹುದು.

## ೨೨. ಕೃಷ್ಣ ರುಕ್ಮೀಣಿಯು ಸರಸದಲ್ಲಿ ಮೈಮರೆತು ನಿಂತಿರುವುದು

ಈ ಚಿತ್ರದಲ್ಲಿ ಕೃಷ್ಣನು ತನ್ನ ತೋಲಿನಲ್ಲಿ ರುಕ್ಮೀಣಿಯನ್ನು ಹಿಡಿದು ನಿಂತಿದ್ದಾನೆ. ಕೃಷ್ಣ ಹಳದಿ ಮತ್ತು ಕೆಂಪು ಉಡುಪನ್ನು ಧರಿಸಿದ್ದಾನೆ. ರುಕ್ಮೀಣಿಯ ಮೈಬಣ್ಣ ಹಳದಿಯಾಗಿದ್ದರೆ, ಕೆಂಪು ಮತ್ತು ಹಸಿರು ಸೀರೆಯನ್ನು ಧರಿಸಿದ್ದಾಳೆ. ಈ ಕಲಾಕೃತಿಯ ಉಳಿದ ಭಾಗವು ಸ್ಪಷ್ಟವಾಗಿದ್ದು ಮುಖದಲ್ಲಿ ಬಣ್ಣಗಳು ಉದುರಿಹೋಗಿವೆ.

## ೨೩. ಅಲಂಕಾರಿಕ ಗಿಡಗಳು

ಕೋಣೆಯ ಕಿಟಕಿಯೊಂದರ ಎಡ ಮತ್ತು ಬಲಗಳಲ್ಲಿ ಎರಡು ಗಿಡಗಳನ್ನು ನೋಡಬಹುಲು. ಎಲೆಯಾಕಾರದಲ್ಲಿ ಉದ್ದಕ್ಕೆ ಇರುವ ಈ ಗಿಡಗಳ ತುದಿಯಲ್ಲಿ ಒಂದೊಂದು ಹಣ್ಣುಗಳು ಗಿಳಿ ಮತ್ತು ಗೊರವಂಕಗಳು ಕುಳಿತುಕೊಂಡು ಹಣ್ಣು ತಿನ್ನುತ್ತಲಿವೆ. ಗಿಡದ ಕೆಳಗೆ ಎರಡು ಬದಿಯಲ್ಲಿ ನವಿಲು, ಕೊಕ್ಕರಿ, ಹಂಸ ನಿಂತಿರುವುದನ್ನು ನೋಡಬಹುದು. ಈ ಗಿಡ-ಮರಗಳ ಚಿತ್ರಗಳನ್ನು ಅಲಂಕಾರಿಕ ಹೂ-ಬಳ್ಳಿಯ ನಕ್ಷೆಯ ವಿನ್ಯಾಸದಂತೆ ಪಟ್ಟಿಕೆ ಬರಿಗೋಡೆಯ ಮೇಲೆ ಅಲ್ಲದೆ ಕೋಣೆಯ ಮೇಲ್ಚಾವಣಿಯಲ್ಲೂ ಬರೆಯಲಾಗಿದೆ. ಇಲ್ಲಿ ಇಡೀ ಗೋಡೆಗಳೇ ಒಂದು ಕಲಾಕೃತಿ ಎಂಬಂತೆ ಭಾವಿಸಿ ಪ್ರತಿಯೊಂದು ದಿಕ್ಕಿನ ಗೋಡೆಯ ನಾಲ್ಕು ಬದಿಗಳಲ್ಲೂ ಹೂ-ಬಳ್ಳಿಯ ನಕ್ಷೆಯನ್ನು ರಚಿಸಲಾಗಿದೆ.

ಈ ಮೇಲಿನ ಭಿತ್ತಿಚಿತ್ರಗಳನ್ನು ಗಮನಿಸಿದಾಗ ಕೃಷ್ಣನ ಜೀವನಕ್ಕೆ ಸಂಬಂಧಿಸಿದಂತೆ, ಅವನ ಲೀಲಾ ವಿನೋದಗಳಿಗೆ ಸಂಬಂಧಿಸಿದಂತೆ ಚಿತ್ರಗಳಿವೆ. ಮತ್ತು ವಿಷ್ಣುವಿಗೆ ಸಂಬಂಧಿಸಿದ ಚಿತ್ರಗಳು ಹಾಗೂ ದೇವತೆಗಳಿಗೆ ಸಂಬಂಧಿಸಿದಂತೆ, ಸಾಮಾನ್ಯ ಜನಜೀವನಕ್ಕೆ ಸಂಬಂಧಿಸಿದಂತೆ ಚಿತ್ರಗಳಿರುವುದರೊಂದಿಗೆ ಈ ಮನೆಯನ್ನು ನಿರ್ಮಿಸಿದ ಖಾಜಿನ ಗೌಡರ ನಿಂತರ ಭಂಗಿಯ ಮತ್ತು ಭಾವಚಿತ್ರ ಎರಡು ಚಿತ್ರಗಳು ಗಮನ ಸೆಳೆಯುತ್ತವೆ. ಹೂಬಳ್ಳಿ, ಹಂಸ ಪಕ್ಷಿ, ಕಾಮಧೇನು ಇಂತಹ ಜನಪ್ರಿಯ ಚಿತ್ರಗಳು ಇಲ್ಲಿ ಅಭಿವ್ಯಕ್ತಿಗೊಂಡಿವೆ.

## ೫.೨. ಆಂಜನೇಯ ದೇವಾಲಯದಲ್ಲಿರುವ ಭಿತ್ತಿಚಿತ್ರಗಳು

ರಾಯಚೂರು ನಗರದ ಹೃದಯಭಾಗವಾದ ಸೋಮವಾರ ಪೇಟೆಯ (ಈ ಸ್ಥಳವನ್ನು ಮಡ್ಡಿಪೇಟೆ ಎಂತಲೂ ಕರೆಯಲಾಗುತ್ತದೆ) ಖಾಜನಗೌಡರ ಮನೆಯ ಹತ್ತಿರದಲ್ಲೇ ಇರುವ ಹನುಮಾನ ಮಂದಿರದಲ್ಲಿ ಭಿತ್ತಿ ಚಿತ್ರಗಳು ಕಂಡುಬಂದಿವೆ. ಖಾಜನಗೌಡರ ಮನೆ ನಿರ್ಮಾಣದ ಅನಂತರದಲ್ಲಿ ಕಟ್ಟಲ್ಪಟ್ಟ ಈ ದೇವಾಲಯದ ಒಳ ಮಾಳಿಗೆ, ಭುವನೇಶ್ವರಿ ಹಾಗೂ ಕಲ್ಲಿನ ತೊಲೆಗಳ ಮೇಲೆ ರಾಮಾಯಣ,

ಮಹಾಭಾರತ ಸನ್ನಿವೇಶದ ಚಿತ್ರಗಳೊಂದಿಗೆ ಪ್ರಾಣಿ–ಪಕ್ಷಿಗಳು, ಅಲಂಕಾರಿಕ ವಿನ್ಯಾಸಗಳು ಚಿತ್ರಣಗೊಂಡಿವೆ. ಹಿಂದೊಮ್ಮೆ ದೇವಾಲಯದ ಗೋಡೆಗಳ ಮೇಲೂ ಚಿತ್ರಗಳಿದ್ದವೆಂದು ಪ್ರತ್ಯಕ್ಷದರ್ಶಿಗಳು ಹೇಳುತ್ತಾರೆ.

ಎತ್ತರವಾದ ಕಟ್ಟೆಯ ಮೇಲೆ ಕಟ್ಟಲ್ಪಟ್ಟ ಈ ದೇವಾಲಯ ದಕ್ಷಿಣಾಭಿಮುಖವಾಗಿದ್ದು, ಮುಖ ಮಂಟಪ ಹಾಗೂ ಗರ್ಭಗೃಹ ಹೊಂದಿದೆ. ಮುಖಮಂಟಪ ನಡುವೆ ನಾಲ್ಕು ಕಂಬಗಳುಳ್ಳ ಅಂಕಣವಿದೆ. ಈ ಅಂಕಣದಲ್ಲಿನ ನಾಲ್ಕು ಕಂಬಗಳು ಹಾಗೂ ಗೋಡೆಗಳಲ್ಲಿನ ಕಂಬಗಳು ಸೇರಿದಂತೆ ಒಟ್ಟು ಹದಿನಾರು ಕಂಬಗಳನ್ನು ಈ ಮುಖ ಮಂಟಪ ಹೊಂದಿದೆ. ಈ ಕಂಬಗಳಲ್ಲಿ ಯಾವುದೇ ರೀತಿಯ ಕುಸುರಿ ಕೆತ್ತನೆ ಕಂಡುಬರುವುದಿಲ್ಲ. ಒಂದು ಕಂಬದಿಂದ ಇನ್ನೊಂದು ಕಂಬಕ್ಕೆ ಆಸರೆಯಾಗಿ ಒಟ್ಟು ಇಪ್ಪತ್ನಾಲ್ಕು ತೊಲೆಗಳನ್ನು ಜೋಡಿಸಿದೆ. ಹಾಗಾಗಿ ಈ ತೊಲೆಗಳ ಮುಖಮಂಟಪವನ್ನು ಒಟ್ಟು ಒಂಭತ್ತು ಅಂಕಣಗಳಂತೆ ವಿಭಾಗಿಸುತ್ತದೆ.

ಪ್ರತಿಯೊಂದು ಅಂಕಣದಲ್ಲಿ ಹಾಗೂ ತೊಲೆಗಳ ಮೂರೂ ಬದಿಯಲ್ಲಿ ವರ್ಣಚಿತ್ರಗಳಿವೆ. ಮಧ್ಯದ ಅಂಕಣ ಹಾಗೂ ನಾಲ್ಕೂ ಮೂಲೆಗಳಲ್ಲಿ ಅಂಕಣಗಳ ಮಧ್ಯೆ ಸುಂದರವಾದ ಭುವನೇಶ್ವರಿಯ ಕೆತ್ತನೆಯಿದ್ದು, ಈ ಕೆತ್ತನೆಯ ಮೇಲೆ ಹಳದಿ ವರ್ಣದ ಹಿನ್ನೆಲೆಯಲ್ಲಿ ಹಸಿರು, ಕೆಂಪು ಹಾಗೂ ನೀಲಿ ವರ್ಣಗಳಿಂದ ನವಿಲು, ಗಿಳಿ, ಗೊರವಂಕ ಇತ್ಯಾದಿ ಪ್ರಾಣಿಗಳ ಚಿತ್ರಗಳೊಂದಿಗೆ ಸುಂದರವಾದ ನಕ್ಷಾ ಚಿತ್ರಗಳನ್ನು ಬಿಡಿಸಿದೆ. ಇನ್ನುಳಿದ ಅಂಕಣಗಳಲ್ಲಿ ಭುವನೇಶ್ವರಿಯ ಕೆತ್ತನೆ ಕಂಡು ಬರುವುದಿಲ್ಲವಾದರೂ, ನೀಲಿ, ಹಳದಿ ಹಾಗೂ ಕೆಂಪು ವರ್ಣಗಳ ನಕ್ಷೆ ವಿನ್ಯಾಸದ ಚಿತ್ರವಿದೆ. ಹಾಗೆಯೇ ಕಲ್ಲಿನ ತೊಲೆಗಳ ಮೂರೂ ಬದಿಯಲ್ಲಿ ಸಮುದ್ರಮಂಥನ, ಅಶ್ವಮೇಧಯಾಗ ಕುದುರೆಯನ್ನು ಕಟ್ಟಿ ಹಾಕುವುದು, ಸೀತಾ ಸ್ವಯಂವರ, ಲವ–ಕುಶ, ಯುದ್ಧದ ಸನ್ನವೇಶ ಮೊದಲಾದ ಚಿತ್ರಗಳಿವೆ. ಪ್ರತಿಯೊಂದು ವಿಷಯದ ಚಿತ್ರಗಳಲ್ಲಿ ದೇವಾತಾ ಪುರುಷರನ್ನು ಚಿತ್ರಿಸಲಾಗಿದೆ.

ಈ ದೇವಾಲಯದ ಗರ್ಭಗೃಹದಲ್ಲಿನ ಆಂಜನೇಯಸ್ವಾಮಿ ವಿಗ್ರಹವು ಶಿಲೆಯಿಂದ ನಿರ್ಮಿತಗೊಂಡಿದ್ದು, ಐದು ಅಡಿ ಎತ್ತರವಾಗಿದೆ. ಗರ್ಭಗೃಹದ ದ್ವಾರದ ಮೇಲಿನ ಶಿಲಾಪಟ್ಟಿಕೆಯಲ್ಲಿ ಏಳು ಹೆಡೆಗಳುಳ್ಳ ಆದಿಶೇಷನ ಮೇಲೆ ವಿಷ್ಣು ಪವಡಿಸಿದ್ದಾನೆ. ಶ್ರೀದೇವಿ ಹಾಗೂ ಭೂದೇವಿಯರು ವಿಷ್ಣುವಿನ ಪಾದ ಸೇವೆಯಲ್ಲಿ ನಿರತರಾಗಿದ್ದಾರೆ. ವಿಷ್ಣುವಿನ ನಾಭಿಯಿಂದ ಜನಿಸಿದ ಬ್ರಹ್ಮನು ಕಮಲದಲ್ಲಿ ವಿರಾಜಮಾನನಾಗಿದ್ದಾನೆ. ಶೇಷಶಾಯಿ ವಿಷ್ಣುವಿನ ಎರಡೂ ಕಡೆ ಗರುಡ ಹಾಗೂ ಆಂಜನೇಯರನ್ನು ಕೆತ್ತನೆಯಾಗಿದೆ. ಈ ಕೆತ್ತನೆಯ ಮೇಲೆ ವರ್ಣಲೇಪನ ಮಾಡಲಾಗಿದೆ. ಹಾಗೆಯೇ ಈ ಶಿಲಾ ಪಟ್ಟಿಕೆಯ ಮೇಲ್ಭಾಗದಲ್ಲಿ ಸೂರ್ಯ ಹಾಗೂ ಚಂದ್ರರನ್ನು ವರ್ಣದಿಂದ ಚಿತ್ರಿಸಿದೆ. ಇದಿಷ್ಟು ದೇವಾಲಯದೊಳಗಿನ

ವಿನ್ಯಾಸದ ಚಿತ್ರಣ. ಈ ದೇವಾಲಯ ಮುಖಮಂಟಪದ ಹೊರಭಾಗದ ಮೇಲ್ಪದಿಯಲ್ಲಿ, ಎದುರಿಗೆ ಸುಂದರವಾದ ಕಮಾನಿನ ವಿನ್ಯಾಸವಿದ್ದು, ಈ ಕಮಾನಿನೊಳಗೆ ರಾಮ–ಸೀತೆ, ಲಕ್ಷಣ ಹಾಗೂ ಆಂಜನೇಯನ ಗಾರೆ ಶಿಲ್ಪಗಳಿವೆ. ಈ ಶಿಲ್ಪಗಳ ಮೇಲೂ ವರ್ಣ ಲೇಪನ ಮಾಡಲಾಗಿದೆ.

ಹನುಮಾನ ಮಂದಿರದ ನಿರ್ಮಾಣವನ್ನು ಖಾಜನಗೌಡರೆ ಮಾಡಿರುವುದು ಮಾತ್ರವಲ್ಲದೆ ಅದರಲ್ಲಿ ಚಿತ್ರಗಳನ್ನು ಬರೆಯಿಸಿದ್ದಾರೆ ಎಂದು ಹೇಳಲಾಗುತ್ತದೆ. ಶಿಷ್ಟ ಸಂಪ್ರದಾಯದ ಈ ಚಿತ್ರಗಳನ್ನು ಖಾಜನಗೌಡರೇ ಬರೆಯಿಸಿದ್ದಾರೆಂದು ಇಲ್ಲಿನ ಜನರ ಅನಿಸಿಕೆ. ಖಾಜನಗೌಡರ ಮನೆಯಲ್ಲೂ ಸಾಕಷ್ಟು ಭಿತ್ತಿಚಿತ್ರಗಳಿರುವ ಕಾರಣ ಮೇಲಿನ ಅಭಿಪ್ರಾಯ ಮೂಡಿರಲು ಸಾಧ್ಯ. ಖಾಜನಗೌಡರ ಮನೆಯಲ್ಲಿನ ಕರ್ಣಾರ್ಜುನರ ಕಾಳಗ, ರಾಮ–ಸೀತೆಯರ ದರ್ಶನ ಹಾಗೂ ಚಿತ್ರಪಟ್ಟಿಕೆಗಳ ಸುತ್ತಲೂ ಬರೆಸಲಾದ ವಿನ್ಯಾಸಗಳ ಹೋಲಿಕೆ ಹನುಮಾನ ಮಂದಿರದಲ್ಲಿನ ಚಿತ್ರಗಳಲ್ಲಿ ಕಾಣಸಿಗುವುದು. ಹನುಮಾನ ಮಂದಿರದಲ್ಲಿ ಗೋಡೆ ಮತ್ತು ಮೇಲ್ಛಾವಣಿಗಳಲ್ಲಿ ಭಿತ್ತಿ ಚಿತ್ರಗಳಿದ್ದು, ಹೆಚ್ಚಿನ ಭಾಗ ನಾಶವಾಗಿವೆ. ಅಳಿದುಳಿದ ಕೆಲವು ಚಿತ್ರಗಳನ್ನು ಕೆಳಗಿನಂತೆ ಸಂಕ್ಷಿಪ್ತವಾಗಿ ವಿವರಿಸಬಹುದು.

**೧. ಸಮುದ್ರಮಂಥನದ ದೃಶ್ಯ**

ಈ ಕಲಾಕೃತಿಯಲ್ಲಿ ದೇವತೆಗಳು ಮತ್ತು ರಾಕ್ಷಸರು ಮಂದಾರ ಪರ್ವತವನ್ನು ಕಡಗೋಲು ಮೂಡಿ ಆದಿಶೇಷನನ್ನು ಹಗ್ಗವಾಗಿ ಬಳಸಿಕೊಂಡು ಸಮುದ್ರವನ್ನು ಮಂಥನ ಮಾಡುತ್ತಿದ್ದಾರೆ. ಅನೇಕ ದೇವಾಲಯಗಳು ಮತ್ತು ಇನ್ನಿತರ ಸ್ಥಳಗಳಲ್ಲಿ ಶಿಲ್ಪ ಮತ್ತು ಚಿತ್ರಕಲೆಗಳಲ್ಲಿ ಈ ವಿಷಯ ರಚನೆಯಾಗಿರುತ್ತದೆ. ಆದರೆ ಇಲ್ಲಿನ ಚಿತ್ರವು ಅವುಗಳಿಗಿಂತ ವಿಶೇಷವಾಗಿದೆ. ಕಾರಣ ಈ ಚಿತ್ರದಲ್ಲಿ ಸಮುದ್ರ ಮಂಥನ ಮಾಡುವಲ್ಲಿ ಸ್ವತಃ ತ್ರಿಮೂರ್ತಿಗಳಾದ, ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ತೊಡಗಿಕೊಂಡಿದ್ದಾರೆ. ಇದರಲ್ಲಿ ಮೊದಲಿಗೆ ಬ್ರಹ್ಮನನ್ನು ಚಿತ್ರಿಸಲಾಗಿದೆ.

ನಾಲ್ಕು ಕೈಗಳು, ನಾಲ್ಕು ಮುಖಗಳನ್ನು ಈತನಿಗೆ ಚಿತ್ರಿಸಲಾಗಿದೆ. ಕೆಂಪು ಮೈಬಣ್ಣ, ಹಳದಿ ಮತ್ತು ಹಸಿರು ವರ್ಣದ ವಸ್ತ್ರ ವಿನ್ಯಾಸ ಕಂಡುಬರುತ್ತದೆ. ಎರಡನೆಯದಾಗಿ ವಿಷ್ಣುವನ್ನು ಚಿತ್ರಿಸಿದ್ದು ಆತನ ಮೈಬಣ್ಣ ನೀಲಿಯಾಗಿದೆ. ಈತನಿಗೆ ಹಸಿರು ಮತ್ತು ಕೆಂಪು ವರ್ಣದ ವಸ್ತ್ರವಿನ್ಯಾಸವಿದೆ. ನಂತರದಲ್ಲಿ ಶಿವನನ್ನು ಚಿತ್ರಿಸಲಾಗಿದೆ. ಆತನಿಗೂ ನಾಲ್ಕು ಕೈಗಳು ಚಿತ್ರಿಸಲ್ಪಟ್ಟಿವೆ. ಈತನಿಗೆ ಕೆಂಪು ಹಸಿರು ವರ್ಣದ ವಸ್ತ್ರಧಾರಣೆ ಕಂಡುಬರುತ್ತದೆ. ತ್ರಿಮೂರ್ತಿಗಳು ಎಲ್ಲರೂ ನಾಲ್ಕು ಕೈಗಳನ್ನು ಹೊಂದಿದ್ದು, ತಮ್ಮ ತಮ್ಮ ಆಯುಧಗಳನ್ನು ಕೈಯಲ್ಲಿ ಹಿಡಿದಿದ್ದಾರೆ. ರಾಕ್ಷಸರ ಭಾಗವು ಸಂಪೂರ್ಣವಾಗಿ ನಾಶವಾಗಿದ್ದು, ಯಾವುದೇ ವಿವರ ಗೋಚರಿಸುವುದಿಲ್ಲ.

## ೨. ಧರ್ಮ ಬೋಧನೆ ಆಲಿಸುತ್ತಿರುವ ರಾಜ

ಈ ಚಿತ್ರದಲ್ಲಿ ರಾಜನೊಬ್ಬನು ಧಾರ್ಮಿಕ ಮುನಿಯೊಬ್ಬನಿಂಥ ಧರ್ಮ ಬೋಧನೆ ಪಡೆಯುತ್ತಿದ್ದಾನೆ. ರಾಜನು ಸಿಂಹಾಸನದಂತಹ ಅಲಂಕಾರಿಕ ಪೀಠದ ಮೇಲೆ ಕುಳಿತುಕೊಂಡಿದ್ದಾನೆ, ಎಡಭುಜದಲ್ಲಿ ಜಿಲ್ಲನ್ನು ಧರಿಸಿದ್ದಾನೆ, ಆತನ ಎದುರಿಗೆ ಕುಳಿತ ಋಷಿಮುನಿಯು ಹುಲಿಯ ಚರ್ಮದ ಮೇಲೆ ಕುಳಿತುಕೊಂಡಿದ್ದಾನೆ. ಆತನ ಎದುರಿಗೆ ಕಮಂಡಲು, ಐರಣಿ, ಧರ್ಮಗ್ರಂಥಗಳಿವೆ. ಹಿನ್ನೆಲೆಯಲ್ಲಿ ಆಕರ್ಷಕವಾದ ಗಿಡಗಳ ಗುಂಪುಗಳನ್ನು ಚಿತ್ರಿಸುವುದರ ಮೂಲಕ ಕಾಡಿನಲ್ಲಿ ಋಷಿಮುನಿಗಳ ಆಶ್ರಮದ ಕಲ್ಪನೆಯನ್ನು ಕಲಾವಿದ ಇಲ್ಲಿ ನಿರ್ಮಿಸಿದ್ದಾನೆ. ವ್ಯಕ್ತಿಗಳ ಮೈಬಣ್ಣ ವಸ್ತ್ರದ ಬಣ್ಣ ಹಾಳಾಗಿದ್ದು ಚಿತ್ರದ ಹೊರರೇಖೆಗಳು ಮತ್ತು ಹಳದಿ ವರ್ಣ ಮಾತ್ರ ಉಳಿದುಕೊಂಡಿವೆ. ಋಷಿಮುನಿ ಹಣೆಗೆ ಮತ್ತು ತೋಳುಗಳಿಗೆ ವಿಭೂತಿಧಾರಣೆ ಮಾಡಿದ್ದಾನೆ.

## ೩. ಆಲದ ಎಲೆಯ ಮೇಲೆ ಪವಡಿಸಿದ ಕೃಷ್ಣ

ಈ ಚಿತ್ರದ ಹೆಚ್ಚಿನ ಭಾಗ ನಾಶವಾಗಿದೆ. ಇದರಲ್ಲಿ ಮುಖ್ಯವಾಗಿ ಹಸಿರು ಬಣ್ಣದ ಆಲದ ಎಲೆಯ ಮೇಲೆ ನೀಲಿ ವರ್ಣದ ಬಾಲಕ ಕೃಷ್ಣನನ್ನು ಚಿತ್ರಿಸಲಾಗಿದೆ. ಆತನ ಬಲ ಭಾಗದಲ್ಲಿ ಹಸಿರು ಸೀರೆಯುಟ್ಟ ಸ್ತ್ರೀ ಮತ್ತು ಎಡ ಭಾಗದಲ್ಲಿ ಕೆಂಪು ವರ್ಣದ ಸೀರೆಯುಟ್ಟ ಸ್ತ್ರೀಯನ್ನು ಚಿತ್ರಿಸಲಾಗಿದೆ. ಈ ಚಿತ್ರದ ಇನ್ನುಳಿದ ಹೆಚ್ಚಿನ ವಿವರಗಳು ಕಂಡುಬರುವುದಿಲ್ಲ.

## ೪. ನೃತ್ಯ ವೀಕ್ಷಿಸುತ್ತಿರುವ ಗಣ್ಯವ್ಯಕ್ತಿ

ಈ ಚಿತ್ರದಲ್ಲಿ ಸರ್ವಾಲಂಕಾರ ಭೂಶಿತಳಾದ ಸ್ತ್ರೀಯೊಬ್ಬಳು ನೃತ್ಯ ಮಾಡುತ್ತಿದ್ದಾಳೆ, ಆಕೆಗೆ ಸಹಾಯಕರಾಗಿ ಮೂರು ಜನ ಸ್ತ್ರೀಯರು ಜೊತೆಗೆ ನರ್ತಿಸುತ್ತಿದ್ದಾರೆ. ವಿವಿಧ ಭಾವ ಭಂಗಿಗಳಿಂದ ಸ್ತ್ರೀಯರ ನೃತ್ಯದಲ್ಲಿ ಒಂದು ರೀತಿಯ ಚಲನೆ ಕಂಡುಬರುತ್ತದೆ. ಈ ನೃತ್ಯ ಕಾರ್ಯಕ್ರಮವನ್ನು ಗಣ್ಯವ್ಯಕ್ತಿಯೊಬ್ಬನು ಬಲಗೈಯಲ್ಲಿ ಗುಲಾಬಿ ಹೂ ಹಿಡಿದುಕೊಂಡು ನಿಂತುಕೊಂಡು ವೀಕ್ಷಿಸುತ್ತಿದ್ದಾನೆ. ಎಡಗೈಯಲ್ಲಿ ಖಡ್ಗದಂತಹ ಆಯುಧ ಕಂಡುಬರುತ್ತದೆ. ಈತನು ಕಪ್ಪು ಬಣ್ಣದ ಉದ್ದ ತೋಳಿನ ನಿಲುವಂಗಿಯನ್ನು ಧರಿಸಿದ್ದಾನೆ. ಸೊಂಟಕ್ಕೆ ಉತ್ತರಿಯನ್ನು ಕಟ್ಟಿಕೊಂಡಿದ್ದಾನೆ. ಬಲಭುಜದ ಮೇಲೆ ಗಣ್ಯ ವ್ಯಕ್ತಿಗಳ ಸಂಕೇತವಾದ ಶಾಲಿನಂತಹ ವಸ್ತ್ರವಿದೆ. ಕಾಲಲ್ಲಿ ಬೂಟು, ತಲೆಯ ಪೇಠ ಆತನ ಘನ ವ್ಯಕ್ತಿತ್ವವನ್ನು ಬಿಂಬಿಸುತ್ತವೆ. ಈ ಕಲಾಕೃತಿಯಲ್ಲಿ ಹಸಿರು, ಹಳದಿ, ನಸುಗೆಂಪು, ವರ್ಣಗಳು ಮಾತ್ರ ಉಳಿದುಕೊಂಡಿವೆ. ಉಳಿದಂತೆ ಹೆಚ್ಚಿನ ಭಾಗ ನಾಶವಾಗಿದೆ.

### ೫. ಕೃಷ್ಣನ ವಿಶ್ವರೂಪ ದರ್ಶನ

ಈ ಚಿತ್ರದಲ್ಲಿ ಕೃಷ್ಣನು ಅರ್ಜುನನಿಗೆ ವಿಶ್ವರೂಪ ದರ್ಶನ ಕೊಡುವ ಸನ್ನಿವೇಶ ಚಿತ್ರಿಸಲಾಗಿದೆ. ಈ ಬಗೆಯ ಚಿತ್ರವೊಂದು ಧಾರವಾಡದ ಬಳಿಯ ಅಮ್ಮಿನಬಾವಿಯ ವೀರಶೈವ ಮಠದಲ್ಲಿ ಕಂಡುಬರುತ್ತದೆ. ಆ ಚಿತ್ರದಂತೆ ಈ ಹನುಮಾನ ಮಂದಿರದ ಚಿತ್ರವು ಸಹಿತ ಭಿನ್ನವಾಗಿ ಕಂಡುಬರುತ್ತದೆ. ಕೃಷ್ಣನನ್ನು ವ್ಯಕ್ತಿರೂಪದಲ್ಲಿ ಚಿತ್ರಿಸದೆ ಪ್ರಾಣಿ, ಪಕ್ಷಿ, ಮನುಷ್ಯ, ಜಲಚರಗಳು, ಹಾವು ಮುಂತಾದ ಅನೇಕ ಜೀವಿಗಳ ಸಂಯುಕ್ತ ರೂಪದಲ್ಲಿ ಚಿತ್ರಿಸಲಾಗಿದೆ. ಇದು ಜಗತ್ತಿನ ಸಮಸ್ತ ಜೀವರಾಶಿಗಳು ಕೃಷ್ಣನಲ್ಲಿ ಅಡಗಿಕೊಂಡಿವೆ ಎಂದು ತೋರಿಸುವ ಸಾಂಕೇತಿಕ ಚಿತ್ರವಾಗಿದೆ. ಇದರಲ್ಲಿ ಆನೆ, ಹುಲಿ, ಚಿರತೆ, ಜಿಂಕೆ, ಮನುಷ್ಯ, ಪಕ್ಷಿ ಮತ್ತು ಸರ್ಪಗಳ ಸಂಯುಕ್ತ ರೂಪವನ್ನು ಚಿತ್ರಿಸಲಾಗಿದೆ. ಬಲಭಾಗದಲ್ಲಿ ಅರ್ಜುನನು ನಿಂತುಕೊಂಡಿರುವಂತೆ ರಚಿಸಲಾಗಿದೆ. ಇಲ್ಲಿ ರಥಗಳು ಯುದ್ಧಪರಿಕರಗಳು ಕಂಡುಬರುವುದಿಲ್ಲ. ಇದೇ ರೀತಿಯಲ್ಲಿ ಅಮ್ಮಿನಬಾವಿಯಲ್ಲಿಯು ಕಂಡುಬರುತ್ತದೆ. ಈ ಚಿತ್ರವು ಅದಕ್ಕಿಂತ ಸುಂದರವಾಗಿದ್ದು, ಹೆಚ್ಚಿನ ಭಾಗ ನಾಶವಾಗಿದೆ. ಕೆಂಪು, ನೀಲಿ, ಹಳದಿ, ಹಸಿರು, ಕಂದುಗೆಂಪು ಮತ್ತು ಕಪ್ಪುವರ್ಣಗಳು ಇಲ್ಲಿ ಪ್ರಮುಖವಾಗಿ ಬಳಕೆಗೊಂಡಿವೆ.

### ೬. ಶ್ರೀರಾಮನು ಸಾಲವೃಕ್ಷ ಭೇದಿಸುತ್ತಿರುವುದು

ರಾಮಾಯಣದಲ್ಲಿ ಈ ಪ್ರಸಂಗವು ಬರುತ್ತದೆ. ವಾಲಿಯನ್ನು ಸಂಹರಿಸಲು ಶ್ರೀರಾಮನಿಗೆ ಸಾಮರ್ಥ್ಯ ಇದೆಯೋ ಇಲ್ಲವೋ ಎಂದು ಸುಗ್ರೀವನು ಅನುಮಾನಗೊಂಡಾಗ, ರಾಮನು ತನ್ನ ಒಂದೇ ಬಾಣ ಪ್ರಯೋಗದಿಂದ ಸಾಲಾಗಿ ಬೆಳೆದಿರುವ ಏಳು ಸಾಲವೃಕ್ಷಗಳನ್ನು ಒಂದೇ ಬಾರಿಗೆ ಕತ್ತರಿಸುತ್ತಾನೆ. ಈ ಪ್ರಸಂಗವು ಚಿತ್ರದಲ್ಲಿ ರಚನೆಯಾಗಿದೆ. ಇದರಲ್ಲಿ ರಾಮನು ತನ್ನ ಬಿಲ್ಲಿನಿಂದ ಬಾಣವನ್ನು ಬಿಡುತ್ತಿದ್ದಾನೆ. ಆತನ ಎದುರಿಗೆ ಸಾಲಾಗಿರುವ ಏಳು ವೃಕ್ಷಗಳನ್ನು ಚಿತ್ರಿಸಲಾಗಿದೆ. ಆದರೆ ಚಿತ್ರವು ನಾಶವಾಗಿ ಕೇವಲ ನಾಲ್ಕು ವೃಕ್ಷದ ಬೊಡ್ಡೆಗಳು ಉಳಿದುಕೊಂಡಿವೆ. ರಾಮನು ನೀಲಿವರ್ಣದವನಾಗಿದ್ದು, ಕೆಂಪುವಸ್ತ್ರ ಧರಿಸಿದ್ದಾನೆ. ಉಳಿದಂತೆ ಹೆಚ್ಚಿನ ವಿವರಗಳು ತಿಳಿದು ಬರುವುದಿಲ್ಲ.

### ೭. ಲವ-ಕುಶರು ರಾಮನ ಅಶ್ವಮೇಧ ಯಾಗದ ಕುದುರೆಯನ್ನು ಕಟ್ಟಿರುವುದು

ಈ ಚಿತ್ರದಲ್ಲಿ ರಾಮನ ಮಕ್ಕಳಾದ ಲವ-ಕುಶರು ರಾಮನ ಅಶ್ವಮೇಧ ಯಾಗದ ಕುದುರೆಯನ್ನು ಕಟ್ಟಿಹಾಕಿದ್ದಾರೆ. ಅದನ್ನು ಬಿಡಿಸಿಕೊಳ್ಳಲು ಸ್ವತಃ ರಾಮನೇ ಬಂದಾಗ ಲವ-ಕುಶರು ಮತ್ತು ರಾಮನಿಗೆ ಯುದ್ಧ ನಡೆದ ಸಂದರ್ಭವನ್ನು ಚಿತ್ರಿಸಲಾಗಿದೆ. ಇದರಲ್ಲಿ ಕೆಂಪು ಬಣ್ಣದ ಅಶ್ವಮೇಧ ಕುದುರೆಯನ್ನು

ಮರಕ್ಕೆ ಕಟ್ಟಿಹಾಕಲಾಗಿದೆ. ಲವಕುಶರು ರಾಮನೊಂದಿಗೆ ಬಿಲ್ಲು-ಬಾಣ ಹಿಡಿದು, ಯುದ್ಧ ಮಾಡುತ್ತಿದ್ದಾರೆ. ರಾಮನು ಬಿಟ್ಟ ಎರಡು ಬಾಣಗಳು ಲವಕುಶರ ಕಡೆಗೆ ನುಗ್ಗಿ ಬರುತ್ತಿವೆ. ಎಡ ಭಾಗದಲ್ಲಿ ವಾಲ್ಮೀಕಿ ಮಹರ್ಷಿ ಮತ್ತು ಸೀತಾಮಾತೆ ನಿಂತಿರುವಂತೆ ಚಿತ್ರಿಸಲಾಗಿದೆ. ಚಿತ್ರದ ಬಹುಭಾಗ ಹಾಳಾಗಿದೆ. ಕುದುರೆಯ ಚಿತ್ರ ಮತ್ತು ಅದನ್ನು ಕಟ್ಟಿಹಾಕಿದ ಮರದ ಚಿತ್ರ ಸ್ವಲ್ಪ ಗುರುತಿಸುವಂತಿದೆ. ಇಲ್ಲಿ ಕೆಂಪು, ಹಳದಿ, ಹಸಿರು, ನೀಲಿ, ತಿಳಿಕೆಂಪು, ನಸುಕೆಂಪು ಮುಂತಾದ ಬಣ್ಣಗಳು ಬಳಕೆಗೊಂಡಿವೆ.

**೮. ನವಿಲುಗಳ ಚಿತ್ರ**

ದೇವಾಲಯದ ಮೇಲ್ಛಾವಣಿಯಲ್ಲಿರುವ ಅಲಂಕಾರಿಕ ಭುವನೇಶ್ವರ ಸುತ್ತಲೂ ನವಿಲುಗಳ ಚಿತ್ರವನ್ನು ರಚಿಸಿದ್ದಾರೆ. ಎರಡು ಚೌರಸಗಳನ್ನು ಒಂದಕ್ಕೊಂದು ಸಂಯೋಜಿಸಿ ನಾಲ್ಕು ಬದಿಗಳಲ್ಲಿ ಒಂದೇ ವಿನ್ಯಾಸದಲ್ಲಿರುವ ನಾಲ್ಕು ನವಿಲುಗಳನ್ನು ಚಿತ್ರಿಸಿದ್ದಾರೆ. ನವಿಲಿನ ಕೊರಳಲ್ಲಿ ಆಭರಣವನ್ನು ಚಿತ್ರಿಸಿದ್ದಾರೆ. ಚೌರಸದ ಒಳಭಾಗದಲ್ಲಿ ಮತ್ತು ಇಡೀ ಚಿತ್ರದ ಅಂಚುಗಳಲ್ಲಿ ಹೂಬಳ್ಳಿಯ ನಕ್ಷೆಗಳನ್ನು ಸುಂದರವಾಗಿ ರಚಿಸಿದ್ದಾರೆ. ಈ ನಕ್ಷೆಗಳು ನೈಜ್ಯ ಶೈಲಿಯಲ್ಲಿವೆ. ಇಲ್ಲಿ ಹಳದಿ, ನೀಲಿ, ತಿಳಿಕೆಂಪು, ನೇರಳೆ, ಹಸಿರು, ಕಪ್ಪು, ಕಂದುಗೆಂಪು, ಬಣ್ಣಗಳನ್ನು ಪ್ರಮುಖವಾಗಿ ಬಳಸಿದ್ದಾರೆ.

**೯. ಗಿಳಿಗಳ ಚಿತ್ರ**

ಮೇಲ್ಛಾವಣಿಯ ಮತ್ತೊಂದು ಅಂಕಣದಲ್ಲಿ ಇದೇ ರೀತಿಯಲ್ಲಿ ಎರಡು ಚೌಕಗಳನ್ನು ಒಂದರೊಳಗೊಂದು ಸಂಯೋಜಿಸಿ ಅವುಗಳ ನಾಲ್ಕು ಭಾಗಗಳಲ್ಲಿ ಒಂದೇ ವಿನ್ಯಾಸದಲ್ಲಿರುವ ನಾಲ್ಕು ಗಿಳಿಗಳನ್ನು ಚಿತ್ರಿಸಲಾಗಿದೆ. ಇಲ್ಲಿ ಚೌಕದ ಒಳಭಾಗ, ವೃತ್ತಗಳ ಒಳಭಾಗ, ಚಿತ್ರದ ಪ್ರತಿಯೊಂದು ಅಂಚುಗಳು ಸುಂದರವಾದ ನಕ್ಷೆಗಳಿಂದ ಅಲಂಕರಿಸಲ್ಪಟ್ಟಿವೆ. ಹೂ ಬಳ್ಳಿಯ ನಕ್ಷೆಗಳ ಜೊತೆಗೆ ಜಾಮಿತಿಕ ವಿನ್ಯಾಸದ ಅಲಂಕರಣ ಕಂಡುಬರುತ್ತದೆ. ಹಸಿರು ಬಣ್ಣದ ಗಿಳಿಗಳು, ತಿರುಗಿ ನೋಡುತ್ತಿರುವಂತೆ ಆಕರ್ಷಕವಾಗಿವೆ. ಹಸಿರು, ನೀಲಿ, ಹಳದಿ, ಕೆಂಪು, ಕಪ್ಪು, ನೇರಳೆ ಬಣ್ಣಗಳು ಇಲ್ಲಿ ಮುಖ್ಯವಾಗಿ ಬಳಕೆಗೊಂಡಿವೆ.

**೧೦. ನಾಲ್ಕು ನವಿಲುಗಳ ಚಿತ್ರ**

ದೇವಾಲಯದ ಮತ್ತೊಂದು ಅಂಕಣದಲ್ಲಿ ಮೊದಲಿನಂತೆ ಎರಡು ಚೌಕಗಳನ್ನು ಒಂದರೊಳಗೊಂದು ಸಂಯೋಜಿಸಿ ನಾಲ್ಕು ಭಾಗಗಳಲ್ಲಿ ನಾಲ್ಕು ನವಿಲುಗಳನ್ನು ಚಿತ್ರಿಸಿದ್ದಾರೆ. ಮೊದಲಿನ ಅಂಕಣದ ನವಿಲುಗಳಿಗಿಂತ ಈ ನವಿಲುಗಳು ಹೆಚ್ಚು ಸುಂದರವಾಗಿವೆ. ಚೌರಸದ ಒಳ ಭಾಗವನ್ನು ಕೆಂಪು ಮತ್ತು

ನೀಲಿ ಬಣ್ಣದಿಂದ ತುಂಬಿ ಅದರ ಮೇಲೆ ನಕ್ಷೆಯ ಆಕಾರಗಳನ್ನು ರಚಿಸಿದ್ದಾರೆ. ಚಿತ್ರದ ತುಂಬ ದಟ್ಟವಾಗಿ ಹೂಬಳ್ಳಿಯ ನಕ್ಷೆಗಳು ಕಂಡುಬರುತ್ತವೆ. ನವಿಲುಗಳ ಹಿನ್ನೆಲೆಯಲ್ಲಿ ದಟ್ಟ ಕಂದುಗೆಂಪು ಬಣ್ಣವನ್ನು ಲೇಪಿಸಲಾಗಿದೆ. ನವಿಲುಗಳು ಅತ್ಯಂತ ನೈಜವಾಗಿ ಚಿತ್ರಣಗೊಂಡಿವೆ. ಇಲ್ಲಿಯು ಸಹಿತ ಅವುಗಳ ಕೊರಳಲ್ಲಿ ಆಭರಣ ಚಿತ್ರಿಸಲಾಗಿದೆ. ನವಿಲುಗಳ ಬಾಲದಲ್ಲಿರುವ ಅಲಂಕಾರಿಕ ವಿನ್ಯಾಸಗಳು ಸುಂದರವಾಗಿ ಕಂಡುಬರುತ್ತವೆ.

ಈ ಮೇಲಿನ ಚಿತ್ರಗಳನ್ನು ಗಮನಿಸಿದಾಗ ಇಲ್ಲಿಯೂ ಕೂಡಾ ಖಾಜಿನ ಗೌಡರ ಮನೆಯಲ್ಲಿರುವ ಭಿತ್ತಿಚಿತ್ರಗಳ ವಸ್ತುವಿಷಯ ಪುನರಾವರ್ತನೆಯಾಗಿರುವುದು ಕಂಡುಬರುತ್ತದೆ. ಬಹುಶಃ ಒಂದೇ ಕಾಲಮಾನದಲ್ಲಿ ರಚನೆಯಾದ ಭಿತ್ತಿಚಿತ್ರಗಳು ಇವುಗಳಾಗಿರುವ ಸಾಧ್ಯತೆಗಳಿವೆ. ನೃತ್ಯದ ಚಿತ್ರಗಳು, ಕೃಷ್ಣನ ವಿಶ್ವರೂಪದ ಚಿತ್ರಗಳು, ವಿಷ್ಣುವಿನ ಸಮುದ್ರ ಮಂಥನ ದೃಶ್ಯ, ರಾಮಾಯಣದ ಚಿತ್ರಗಳು, ಲವಕುಶರು, ಹೂ ಬಳ್ಳಿಗಳ ಚಿತ್ರಗಳು ವಿಶೇಷವಾಗಿ ಇಲ್ಲಿಯೂ ಕಂಡುಬರುತ್ತದೆ.

❑❑❑



ಶೇಷಶಾಯಿ ವಿಷ್ಣು



ಕೃಷ್ಣನ ಆಸ್ಥಾನದ ದೃಶ್ಯ





ಮಹಾ ವಿಷ್ಣುವಿನ ಚಿತ್ರ



ಕೃಷ್ಣನು ಗೋಪಿಕಾಸ್ತ್ರೀಯರೊಡನೆ
ಸರಸದಲ್ಲಿರುವುದು



ಗೋಪಿಕಾಸ್ತ್ರೀಯ ಚಿತ್ರ



ಕರ್ಣಾರ್ಜುನರ ಯುದ್ಧದ ದೃಶ್ಯ



ಖಾಜನಗೌಡರ ಮನೆಯ ಒಳಭಾಗ



ಮನೇಯ ವಂಶಸ್ಥರ ದೃಶ್ಯ



ಜಿಂಕೆಗೆ ಎಲೆ ತಿನ್ನಿಸುತ್ತಿರುವ ಮಹಿಳೆ



ಬೆಣ್ಣೆ ಕದಿಯುತ್ತಿರುವ ದೃಶ್ಯ



ಖಾಜನಗೌಡರ ಭಾವಚಿತ್ರ



ಗಂಧರ್ವ ಸ್ತ್ರೀಯರ ಚಿತ್ರ




ನಿಂತಿರುವ ಮಹಿಳೆಯ ಚಿತ್ರ




ಚಿತ್ರಗಳನ್ನು ನಾಶಪಡಿಸಿರುವ ದೃಶ್ಯ




ಧ್ವಜವನ್ನು ಹಿಡಿದ ಮನುಷ್ಯಾಕಾರಗಳು




ಅಲಂಕಾರಿಕ ಹೂ ಕುಂಡಲ ಮತ್ತು ಗಿಳಿಯ ಚಿತ್ರಗಳು




ಬಗಿಲಮೇಲಿನ ಭಿತ್ತಿಚಿತ್ರಗಳು




ಚಿತ್ರಗಳನ್ನು ವೀಕ್ಷಿಸುತ್ತಿರುವ ಸಂಶೋಧಕರು




ಕೋಣೆಯ ಒಳಭಾಗದ ಭಿತ್ತಿಚಿತ್ರಗಳು




ಅಲಂಕಾರಿಕ ಹೂ-ಬಳ್ಳಿ




ಮೇಲ್ಛಾವಣಿಯ ನಷಾ ಚಿತ್ರಗಳು




ಕಿಟಕಿ ಕಾಷ್ಠ ವಿನ್ಯಸ




ಖಾಜನಗೌಡರ ಮನೆಯ ಹೊರಾಂಗಣ ದೃಶ್ಯ





ಶ್ರೀ ಆಂಜನೇಯ್ಯಸ್ವಾಮಿ ದೇವಸ್ಥಾನ ಮಡ್ಡಿಪೇಟೆ



ಸಮುದ್ರ ಮಂಥನ ದೃಶ್ಯ



ಧರ್ಮಬೋಧನೆ ಆಲಿಸುತ್ತಿರುವ ರಾಜ


ಆಲದ ಎಲೆಯ ಮೇಲೆ ಪವಡಿಸಿದ ಕೃಷ್ಣ


ನೃತ್ಯ ವೀಕ್ಷಿಸುತ್ತಿರುವ ಗಣ್ಯವ್ಯಕ್ತಿ


ಕೃಷ್ಣನ ವಿಶ್ವರೂಪ ದರ್ಶನ


ಶ್ರೀರಾಮನು ಸಾಲವೃಕ್ಷ ಬೋಧಿಸುತ್ತಿರುವುದು



ಲವಕುಶರು ರಾಮನ ಅಶ್ವಮೇಧ ಯಾಗದ ಕುದುರೆಯನ್ನು ಕಟ್ಟಿರುವುದು



ಗಿಳಿಗಳ ಚಿತ್ರ



ನವಿಲುಗಳ ಚಿತ್ರ



ಗಿಳಿಗಳ ಚಿತ್ರ



ಹೂಬಳ್ಳಿಯ ನಕ್ಷೆ

ಅಧ್ಯಾಯ – ಆರು

# ಪ್ರಾಗೈತಿಹಾಸಿಕ ಮತ್ತು ಶಿಷ್ಟಪದ ಭಿತ್ತಿಚಿತ್ರಕಲೆಯ ವೈವಿಧ್ಯತೆ

ಪ್ರಾಗೈತಿಹಾಸಿಕ ಮತ್ತು ಶಿಷ್ಟಪದ ಭಿತ್ತಿಚಿತ್ರಗಳ ರಚನೆಯ ಸಂದರ್ಭದಲ್ಲಿ ಸಹಜವಾಗಿ ಭಿನ್ನತೆಗಳಿರುವುದನ್ನು ಕಾಣಬಹುದು. ಇಲ್ಲಿ ಕಾಲಮಾನದ ದೃಷ್ಟಿಯಿಂದ ಪ್ರಾಗೈತಿಹಾಸಿಕ ಚಿತ್ರಗಳು ಅತ್ಯಂತ ಪ್ರಾಚೀನ ಚಿತ್ರಗಳಾಗಿವೆ. ಇವು ಮಾನವನ ನಾಗರಿಕ ಬದುಕಿನ ಪ್ರಾರಂಭಿಕ ಹೆಜ್ಜೆಯ ಗುರುತುಗಳನ್ನು ತಿಳಿಸಿಕೊಡುತ್ತವೆ. ಇಲ್ಲಿ ಚಿತ್ರಕಲೆಯ ರಚನಾ ವಿಧಾನವು ಸಹಿತ ಪ್ರಾರಂಭಿಕ ಹಂತವನ್ನು ಪ್ರತಿನಿಧಿಸುತ್ತದೆ. ಪ್ರಕೃತಿಯೊಂದಿಗೆ ಒಂದಾಗಿ ಬಾಳುತ್ತಿದ್ದ ಮಾನವನು ಈ ಹಂತದಲ್ಲಿ ಚಿತ್ರಕಲೆಯಲ್ಲಿಯೂ ಪ್ರಕೃತಿಯ ವಸ್ತುಗಳನ್ನೇ ಹೆಚ್ಚಾಗಿ ಕಚ್ಚಾರೂಪದಲ್ಲಿ ಬಳಸಿದ್ದಾನೆ.

ಶಿಷ್ಟಪದ ಭಿತ್ತಿಚಿತ್ರ ರಚನೆಯ ಕಾಲಕ್ಕೆ ಮಾನವನ ಬದುಕು ನಾಗರಿಕತೆಯ ಚೌಕಟ್ಟಿಗೆ ಒಳಪಟ್ಟಿತ್ತು.[೧೧] ಆತನ ಜೀವನ ವಿಧಾನಗಳಲ್ಲಿ ಶಿಸ್ತು ಮತ್ತು ನಿಯಮಗಳು ರೂಪಗೊಂಡಿದ್ದವು. ಅದರಂತೆ ಕಲಾ ಬದುಕಿನಲ್ಲಿಯೂ ನೀತಿ, ನಿಯಮಗಳು, ಕಟ್ಟುಪಾಡುಗಳು ರೂಢಿಗೆ ಬಂದಿದ್ದವು. ಅಲ್ಲದೆ ಕಚ್ಚಾ ಸಾಮಗ್ರಿಗಳನ್ನು ಪರಿಷ್ಕರಿಸಿ ಉಪಯೋಗಿಸುವ ಪರಿಪಾಠ ಆರಂಭವಾಗಿತ್ತು. ಇದು ಕಲಾಕ್ಷೇತ್ರದಲ್ಲಿ ಮತ್ತುಷ್ಟು ಕುತೂಹಲ ತರುವ ಸಂಗತಿಯಾಗಿದೆ. ಹೀಗೆ ಪ್ರಾಗೈತಿಹಾಸಿಕ ಕಾಲದ ಚಿತ್ರಗಳ ರಚನಾ ವಿಧಾನ ಮತ್ತು ಶಿಷ್ಟಪದ ಕಾಲದ ಚಿತ್ರ ರಚನಾ ವಿಧಾನಗಳನ್ನು ತೌಲನಿಕವಾಗಿ ನೋಡುವ ಉದ್ದೇಶವು ಈ ಅಧ್ಯಾಯದಲ್ಲಿದೆ. ಇದರಲ್ಲಿ ಎರಡೂ ಕಾಲಘಟ್ಟದ ಚಿತ್ರಗಳ ಸ್ವರೂಪ, ಪ್ರಕಾರಗಳು, ಪರಿಕರಗಳು,

೧೧. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪು-೭೧

ಅಂಟುದ್ರಾವಣ, ಚಿತ್ರರಚನಾ ವಿಧಾನ, ಬಣ್ಣ ಲೇಪನ, ತಂತ್ರಗಾರಿಕೆ ಮುಂತಾದ ಅಂಶಗಳನ್ನು ಪರಿಶೀಲಿಸಲಾಗುವುದು. ಮೊದಲಿಗೆ ಪ್ರಾಗ್ಐತಿಹಾಸಿಕ ಭಿತ್ತಿಚಿತ್ರಗಳ ಕುರಿತು ವಿವೇಚಿಸಲಾಗಿದೆ.

## ೬.೧. ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಸ್ವರೂಪ

ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ವರ್ಣಚಿತ್ರಗಳು ಮತ್ತು ವರ್ಣರಹಿತ ಚಿತ್ರಗಳು ಎಂಬುದಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದು. ವರ್ಣರಹಿತ ಚಿತ್ರಗಳು ಚೂಪಾದ ಸಾಧನದಿಂದ ಕುಟ್ಟಿ ಕೊರೆದು ರಚಿಸಲಾಗಿದ್ದರೆ, ಗುಹಾ ವರ್ಣ ಚಿತ್ರಗಳನ್ನು ಸ್ವಾಭಾವಿಕವಾಗಿ ನಿಸರ್ಗದಲ್ಲಿ ದೊರಕುವ ಬಣ್ಣದ ಕಲ್ಲು, ಮಣ್ಣಿನ ಗಟ್ಟಿಗಳು, ವನಸ್ಪತಿಗಳು ಮಾತ್ರವಲ್ಲದೇ ಪ್ರಾಣಿ ಮೂಲಗಳಿಂದ ಬಣ್ಣ ತಯಾರಿಸಿಕೊಂಡು ರಚನೆ ಮಾಡಲಾಗಿದೆ. ಕೆಲವು ಚಿತ್ರಗಳು ರೇಖಾ ಪ್ರಧಾನವಾಗಿದ್ದರೆ, ಮತ್ತೆ ಕೆಲವು ಚಪ್ಪಟೆಯಾಗಿ ವರ್ಣಲೇಪಿಸಿದ ನೆರಳು ಚಿತ್ರಗಳಾಗಿವೆ.[೨] ಹೆಚ್ಚಿನ ಚಿತ್ರಗಳು ಸುಲಭವಾಗಿ ಪ್ರವೇಶಿಸಲಾಗದಂತಹ ದುರ್ಗಮವಾದ ಗವಿಗಳಲ್ಲಿ ರಚನೆಯಾಗಿವೆ.

ಗುಹಾ ವರ್ಣ ಭಿತ್ತಿ ಚಿತ್ರಗಳಲ್ಲಿ ಪ್ರಾಣಿ ಚಿತ್ರಗಳು ದೊಡ್ಡವು. ಸ್ಪಷ್ಟತೆಯಿಂದ ಕೂಡಿದ್ದು ನೈಜ ರೂಪಕ್ಕೆ ಸಮೀಪವಾಗಿದೆ. ಆದರೆ ಮನುಷ್ಯ ಚಿತ್ರಗಳು ಸಾಂಕೇತಿಕವಾಗಿದ್ದು, ಕಡ್ಡಿ ಚಿತ್ರಗಳ ಮಾದರಿಯಲ್ಲಿವೆ.[೩] ಗುಹಾಚಿತ್ರಗಳು ಗುಹೆಗಳ ಒಳಗೋಡೆ ಮತ್ತು ಮೇಲ್ಛಾವಣಿಗಳಲ್ಲಿ ಇರುವುದು ಸಾಮಾನ್ಯವಾದರೂ ಕೆಲವು ಸಲ ಗುಹೆಯ ಬಾಗಿಲಿನ ಸಮೀಪ ಹೊರಭಾಗದಲ್ಲಿಯೂ ರಚನೆಯಾಗಿರುತ್ತವೆ.

ಗುಹಾ ಚಿತ್ರಗಳು ಗುಹೆಗಳ ಸಮತಟ್ಟಾದ ಸಹಜ ಮೈಯಲ್ಲಿ ಸಾಮಾನ್ಯವಾಗಿ ರಚನೆಯಾಗಿದ್ದರೂ, ಕೆಲವು ವೇಳೆ ಬಂಡೆಯ ಅಂಕುಡೊಂಕು, ಉಬ್ಬುತಗ್ಗು, ಕುಳಿಗಳನ್ನು ಕೂಡಾ ತಮ್ಮ ಚಿತ್ರಗಳಿಗೆ ಪೂರಕವಾಗಿ ಬಳಸಿಕೊಂಡಿದ್ದಾರೆ. ಬಂಡೆಯ ಮೇಲಿರುವ ಉಬ್ಬುತಗ್ಗುಗಳನ್ನು ದೇಹದ ವಿವಿಧ ಭಾಗಗಳಾದ ಭುಜಗಳು, ನಿತಂಬಗಳು, ಎದೆಯ ಉಬ್ಬು ಭಾಗಗಳಿಗೆ ಹೊಂದಿಕೊಂಡಿದ್ದಾರೆ. ಮೊಣಕಾಲು, ಮೊಣಕೈ ಭಾಗಕ್ಕೆ ಕಲ್ಲಿನ ಉಬ್ಬುಗಳು ಸಹಜವಾಗಿ ಬರುವಂತೆ ಸಂಯೋಜಿಸಿ ಚಿತ್ರಿಸಿದ್ದಾರೆ. ಕಲ್ಲಿನ ಮೇಲಿನ ತಗ್ಗುಗಳು ಮತ್ತು ಕುಳಿಗಳನ್ನು ಚಿತ್ರಿತ ಪ್ರಾಣಿಗಳಿಗೆ ಅನುಸಾರವಾಗಿ ಬಳಸಿಕೊಂಡಿದ್ದಾರೆ.

ಗುಹಾವರ್ಣ ಚಿತ್ರಗಳಲ್ಲಿ ಸಾಮಾನ್ಯವಾಗಿ ಪ್ರಾಣಿಗಳು, ಮನುಷ್ಯರು ಮತ್ತು ವಿಚಿತ್ರವಾದ ರೇಖಾಕೃತಿಗಳಿರುತ್ತವೆ, ಕೆಲವು ಗವಿಗಳಲ್ಲಿ ಸಮೂಹನೃತ್ಯ, ಜೋಡಿ ಮನುಷ್ಯರು, ಪ್ರಾಣಿಗಳ ಸಾಲುಗಳಿವೆ.

೦೨ ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ - ಒಂದು ಅಧ್ಯಯನ, ಪು-೩೧೬

೦೩. ಡಾ. ಶರಣಪ್ಪ ಬಸಪ್ಪ ಕೋಲ್ಕಾರ್ : ಕೊಪ್ಪಳ, ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಚಿತ್ರಗಳು, ಪು-೫೮

ಮನುಷ್ಯರು ನಿಂತ ಭಂಗಿಯಲ್ಲಿರುವುದೇ ಹೆಚ್ಚು. ಆಕೃತಿಗಳು ನಿರ್ದಿಷ್ಟ ಪ್ರಮಾಣದಲ್ಲಿರುವುದಿಲ್ಲ. ಒಂದು ಸ್ಥಳದಲ್ಲಿ ಒಂದು, ಎರಡು ಅಥವಾ ಹಲವಾರು ಚಿತ್ರಗಳಿರಬಹುದು. ಹಲವು ಸಲ ಎಲ್ಲಾ ಚಿತ್ರಗಳೂ ಒಂದೇ ಕಾಲದವುಗಳಾಗಿರುವುದಿಲ್ಲ. ಆದ್ದರಿಂದ ವಿವಿಧ ಪ್ರಮಾಣದ ಆಕೃತಿಗಳ ನಿರೂಪಣೆಯಲ್ಲೂ ಭಿನ್ನತೆ ಇರುತ್ತದೆ. ಕೆಲವು ಗುಹೆಗಳಲ್ಲಿ ಒಂದು ಕಾಲದಲ್ಲಿ ರಚಿತವಾದ ಚಿತ್ರಗಳ ಮೇಲೆಯೇ ಮತ್ತೊಬ್ಬರು ಅವುಗಳನ್ನು ಅಳಿಸದೇ ಅದರ ಮೇಲೆಯೇ ಚಿತ್ರ ರಚಿಸಿರುವುದರಿಂದ ಕೆಲವು ಚಿತ್ರಗಳು ಅನೇಕ ಪದರುಗಳನ್ನು[೧೪] ಹೊಂದಿವೆ. ಇದರಿಂದ ಚಿತ್ರಗಳನ್ನು ನಿಖರವಾಗಿ ಗುರುತಿಸುವಲ್ಲಿ ಸಂದಿಗ್ಧತೆ ಉಂಟಾಗುತ್ತದೆ.

ರಾಯಚೂರು ಜಿಲ್ಲೆಯಲ್ಲಿ ಗುಹಾಚಿತ್ರಗಳಲ್ಲಿ ಹೆಚ್ಚಿನ ಮನುಷ್ಯ ಚಿತ್ರಗಳು ರೇಖಾಪ್ರಧಾನವಾಗಿದ್ದು ಮೈಮೇಲೆ ವಿಚಿತ್ರವಾದ ರೇಖಾ ಕೃತಿಗಳನ್ನು ಚಿತ್ರಿಸಲಾಗಿದೆ. ಇವು ನಿಂತ ಭಂಗಿಯಲ್ಲಿದ್ದು ಕೈಗಳನ್ನು ಮೇಲಕ್ಕೆತ್ತಿದ್ದಂತೆ ಇಲ್ಲವೇ ಟೊಂಕದ ಮೇಲೆ ಕೈಗಳನ್ನಿಟ್ಟಂತೆ ರಚನೆಯಾಗಿವೆ.

**ಪ್ರಾಗೈತಿಹಾಸಿಕ ಭಿತ್ತಿಚಿತ್ರ ರಚನೆಯ ಉದ್ದೇಶ**

ಜಗತ್ತಿನ ತುಂಬಾ ಅಲ್ಲಲ್ಲಿ ಕಂಡುಬಂದ ಇಂತಹ ಗುಹಾ ಭಿತ್ತಿಚಿತ್ರಗಳ ರಚನೆಗೆ ಮಾನವನ ಭಾವತೀವ್ರತೆಯ ಅಭಿವ್ಯಕ್ತಿಯೊಂದೇ ಕಾರಣವಾಗಿರಲಾರದು. ಚೆಲುವನ್ನು ಕಾಣುವ ಅದನ್ನು ಹೆಚ್ಚಿಸುವ ದಿಸೆಯಲ್ಲಿ ಕಲಾ ಚಟುವಟಿಕೆಗಳು ಹುಟ್ಟಿಕೊಂಡರೂ ನಂತರದಲ್ಲಿ ಅವು ಬೇರೆ ಬೇರೆ ಉದ್ದೇಶಗಳಿಗಾಗಿಯೂ ಬಳಕೆಯಾಗತೊಡಗಿದವು. ಪ್ರಾಗೈತಿಹಾಸಿಕ ಜನರ ಜೀವನದ ಪ್ರಧಾನ ಅಂಶವೆಂದರೆ ತಮ್ಮ ಜೀವನ ನಿರ್ವಹಣೆಗೆ ಆಹಾರ ಸಂಪಾದನೆ ಮಾಡುವುದು ಮತ್ತು ಆಹಾರವಾಗುವ ಪ್ರಾಣಿ, ಪಕ್ಷಿಗಳ, ಗಿಡಮರಗಳ ಸಮೃದ್ಧ ಬೆಳವಣಿಗೆ ಮತ್ತು ಅವುಗಳನ್ನು ದೊರಕಿಸುವ ಕುರಿತು ಚಿಂತಿಸುವುದಾಗಿತ್ತು. ಈ ಆಶೋತ್ತರಗಳಿಗೆ ಮತ್ತು ವಂಶಾಭಿವೃದ್ಧಿಗಾಗಿ ಕೆಲವು ನಂಬಿಕೆಗಳು, ತತ್ಸಂಬಂಧ, ಕಟ್ಟುಕಟ್ಟಳೆಗಳು ಬೆಳೆದು ಬಂದಿರಬೇಕು. ಇವುಗಳನ್ನು ಪೂರೈಸುವ ಪ್ರಕ್ರಿಯೆಯ ಭಾಗವಾಗಿಯೂ ಗುಹಾಚಿತ್ರಗಳು ರಚನೆಯಾಗಿರಬೇಕು. ಗರ್ಭಧರಿಸಿದ ಪ್ರಾಣಿ, ಗರ್ಭಿಣಿ ಸ್ತ್ರೀ, ಬಾಣ, ಈಟಿಯಿಂದ ಚುಚ್ಚಲ್ಪಟ್ಟ ಪ್ರಾಣಿ, ಪ್ರಾಣಿಗಳ ಬೇಟೆಗೆ ಹೋಗುವ ಮುಂಚೆ ಯಶಸ್ಸನ್ನು ಬೇಡುವ ಸಮೂಹ ನೃತ್ಯ, ಮುಖವಾಡ ಧರಿಸಿದ ವ್ಯಕ್ತಿಗಳು, ಮೈಮೇಲೆ ಚಿತ್ರ ಬರೆದುಕೊಂಡಿರುವ ನಗ್ನ ವ್ಯಕ್ತಿಗಳು, ಸ್ತ್ರೀಯರ ನಗ್ನ ಗುಪ್ತಕುಣಿತಗಳು, ಮಿಥುನ ಕ್ರಿಯೆಯ ಸಂಕೀರ್ಣ ಚಿತ್ರಗಳು, ಕೆಲವು ಸಾಂಕೇತಿಕ ಮಂಡಲ ಚಿತ್ರಗಳು, ಇಂತಹ ಕೆಲವು

---

೧೪. ಡಾ. ಅ. ಸುಂದರ : ಕರ್ನಾಟಕ ಪ್ರಾಗೈತಿಹಾಸಿಕ ಚಿತ್ರಕಲೆ, ಪು-೨೯

ಲಕ್ಷಣಗಳನ್ನು ಗಮನಿಸಿ ವಿದ್ವಾಂಸರು ಇವುಗಳಲ್ಲಿ ತಾಂತ್ರಿಕ ಕಟ್ಟಳೆಯ ವಿಧಾನದ ಚಿತ್ರಗಳೂ ಇರಬಹುದೆಂದು ತರ್ಕಿಸಿದ್ದಾರೆ. ಈ ಗುಹಾ ಚಿತ್ರಗಳಲ್ಲಿ ಕೆಲವು ಸುಲಭವಾಗಿ ಹೋಗಿ ನೋಡಲು ಸಾಧ್ಯವಾಗದ ಸ್ಥಳದಲ್ಲಿವೆಯಲ್ಲದೇ ಉದ್ದೇಶಪೂರ್ವಕವಾಗಿ ಅತಿರೇಕಿಸಿ ಚಿತ್ರಿಸಲಾಗಿದೆ. ಪ್ರಾಯಶಃ ಇಂತಹ ಬಹಳಷ್ಟು ಚಿತ್ರಗಳನ್ನು ತಮ್ಮ ಇಷ್ಟಾರ್ಥಗಳನ್ನು ನೆರವೇರಿಸುವ ಕಾಲದಲ್ಲಿ ಅವುಗಳ ಅಂಗವಾಗಿ ರೂಪಿಸಿದ ಚಿತ್ರಗಳೆಂದು ಅಭಿಪ್ರಾಯಪಡಲಾಗಿದೆ.

**ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯ ಪರಿಕರಗಳು**

ಗುಹಾ ಚಿತ್ರಕಲೆಯ ರಚನೆಗಾಗಿ ಬಳಸಲಾದ ಬಣ್ಣ, ಕುಂಚ, ಅಂಟುದ್ರಾವಕ ಮುಂತಾದ ಪರಿಕರಗಳ ವಿಷಯವಾಗಿ ವಿದ್ವಾಂಸರು ಅಧ್ಯಯನ ನಡೆಸಿದ್ದು, ಆ ಕಾಲದ ಚಿತ್ರ ರಚನೆಯ ಪರಿಕರಗಳ ಬಗ್ಗೆ ಅನೇಕ ಸಂಗತಿಗಳನ್ನು ತಿಳಿಸಿದ್ದಾರೆ. ಆ ಕುರಿತು ಕೆಲವು ಅಂಶಗಳನ್ನು ಗಮನಿಸಬಹುದು.

**ಬಣ್ಣ**

ಚಿತ್ರಕಲೆಯಲ್ಲಿ ಬಣ್ಣವು ಬಹುಮುಖ್ಯ ಪರಿಕರವಾಗಿದೆ. ಚಿತ್ರದ ಅಂದವನ್ನು ಹೆಚ್ಚಿಸುವುದರ ಜೊತೆಗೆ, ನೈಜತೆ, ಮೈವಳಿಕೆ, ಮತ್ತು ನೆರಳು ಬೆಳಕುಗಳಂತಹ ಅಂಶಗಳನ್ನು ಚಿತ್ರದಲ್ಲಿ ಅಳವಡಿಸಲು ಬಣ್ಣವು ಅವಶ್ಯವಾಗಿದೆ. ಪ್ರಾಗೈತಿಹಾಸ ಕಾಲದ ಗುಹಾ ಚಿತ್ರಕಾರರು ಸ್ವಾಭಾವಿಕವಾಗಿ ದೊರೆಯುತ್ತಿದ್ದ ಬಣ್ಣದ ಕಲ್ಲು, ಮಣ್ಣಿನ ಗಟ್ಟಿಗಳಿಂದ, ಸಸ್ಯಗಳಿಂದ ಮತ್ತು ಪ್ರಾಣಿಗಳ ರಕ್ತ, ಕೊಬ್ಬು, ಎಲುಬುಗಳಂತಹ ವಸ್ತುಗಳಿಂದ ಬಣ್ಣ ತಯಾರಿಸಿಕೊಂಡು ಚಿತ್ರ ರಚಿಸಿದ್ದಾರೆ ಎಂಬುದಾಗಿ ಅಭಿಪ್ರಾಯವಿದೆ. ಇಲ್ಲಿ ಉಪಯೋಗಿಸಲಾದ ಬಣ್ಣಗಳಲ್ಲಿ ಹೆಚ್ಚಿನವು ಖನಿಜ ಮೂಲಗಳೇ ಆಗಿವೆ.

ಗುಹಾ ಚಿತ್ರಗಳಲ್ಲಿ ಬಿಳಿ, ಹಳದಿ, ತಿಳಿಕೆಂಪು, ಕಪ್ಪು, ಹಸಿರು ಬಣ್ಣಗಳನ್ನು ಬಳಸಿದ್ದರೂ ಅತಿ ಹೆಚ್ಚು ಬಳಕೆಯಾದ ಬಣ್ಣವು ಕೆಂಪು ಹೆಮಟೈಟ್‌ನಿಂದ ಪಡೆದದ್ದಾಗಿದೆ. ಈ ಕೆಂಪು ಹೆಮಟೈಟ್ ಉಪಯೋಗವನ್ನು ಪ್ರಾರಂಭದ ಅಚೂಲಿಯನ್ ಕಾಲದಲ್ಲಿ ವಾಸವಾಗಿದ್ದ ಆಫ್ರಿಕ, ಯುರೋಪ್ ಮತ್ತು ಭಾರತದ ನಿವಾಸಿಗಳು ತಿಳಿದಿದ್ದರು. ಭಾರತದಲ್ಲಿ ಮೆಸೋಲಿಥಿಕ್ ಕೊನೆಯ ಹಂತದ ಎಲ್ಲ ಗುಹಾ ಚಿತ್ರಗಳಲ್ಲಿ ಹೆಮಟೈಟ್ ಬಣ್ಣ ಕಂಡುಬರುವುದು.

**ಬಣ್ಣಗಳ ತಯಾರಿಕೆ**

ಬಣ್ಣದ ಗಟ್ಟಿಗಳನ್ನು ಕುಟ್ಟಿ ಪುಡಿ ಮಾಡಿ, ಇಲ್ಲವೇ ಗಟ್ಟಿಗಳನ್ನು ಕಲ್ಲಿನ ಮೇಲೆ ನೀರು ಹಾಕಿ

ತೇಯ್ದು ಗಂಧದ ಹಾಗೆ ಮಂದವಾಗಿ ಮಾಡಿಕೊಳ್ಳುತ್ತಿದ್ದರು. ನಂತರ ಇದಕ್ಕೆ ಅಂಟನಂತಹ ಬಂಧಕ ಬೆರೆಸಿ ಉಪಯೋಗಿಸುತ್ತಿದ್ದರು ಎಂದು ತರ್ಕಿಸಲಾಗಿದೆ.

**ಬಣ್ಣದ ತಟ್ಟೆ**

ಚಿತ್ರಕಲೆಯಲ್ಲಿ ಇಂದಿಗೂ ಬಣ್ಣದ ತಟ್ಟೆಯು ಮಹತ್ವದ ಪರಿಕರವಾಗಿದೆ. ವರ್ಣಚಿತ್ರ ರಚನೆಯ ಪೂರ್ವದಲ್ಲಿ ಬೇಕಾದ ಬಣ್ಣಗಳನ್ನು ಅಗತ್ಯ ಪ್ರಮಾಣದಲ್ಲಿ ಕಲಸಿಕೊಳ್ಳಲು ಬಣ್ಣದ ತಟ್ಟೆ ಅವಶ್ಯವಾಗಿ ಬೇಕಾಗುವುದು ಪ್ರಾಗೈತಿಹಾಸಕಾಲದ ಗುಹಾ ಚಿತ್ರಕಾರರು ಕಾಲಾನುಕ್ರಮವಾಗಿ ಅನೇಕ ವಸ್ತುಗಳನ್ನು ಬಣ್ಣ ಮಿಶ್ರ ಮಾಡಿಕೊಳ್ಳಲು ಉಪಯೋಗಿಸಿದ್ದಾರೆ. ಪ್ರಾರಂಭದಲ್ಲಿ ಕಲ್ಲಿನ ತಗ್ಗು ಅಥವಾ ಕುಳಿಗಳನ್ನು ಬಣ್ಣ ಕಲೆಸಿಕೊಳ್ಳಲು ಬಳಸಿಕೊಂಡಿದ್ದರೆ, ನಂತರದ ದಿನಗಳಲ್ಲಿ ಎಲುಬಿನ ಟೊಳ್ಳು, ಎಲೆಗಳಿಂದ ಮಾಡಿದ ಡೊಣೆಯಂತಹ ಪಾತ್ರೆಗಳು, ಟೆಂಗಿನ ಚಿಪ್ಪುಗಳು ಹಾಗೂ ನಂತರದ ದಿನಗಳಲ್ಲಿ ಮಣ್ಣಿನ ಸುಟ್ಟ ಪಾತ್ರೆಗಳನ್ನು ಉಪಯೋಗಿಸಿದಂತೆ ಕಂಡುಬರುತ್ತದೆ.

**ಬಂಧಕ (ಅಂಟು ಪದಾರ್ಥ)**

ಪ್ರಾಗೈತಿಹಾಸಿಕ ಗುಹಾ ಚಿತ್ರಕಾರರು ವರ್ಣಬಂಧಕವಾಗಿ ಅನೇಕ ವಸ್ತುಗಳನ್ನು ಬಳಸಿದ್ದಾರೆ ಎಂದು ಅಭಿಪ್ರಾಯಪಡಲಾಗಿದೆ. ಆಸ್ಟ್ರೇಲಿಯಾದ ಪ್ರಾಗೈತಿಹಾಸಿಕ ಗುಹಾಚಿತ್ರಕಾರರು ತತ್ತಿಯ ಹಳದಿ ಲೋಳೆ (Yolk of egg) ಉಪಯೋಗಿಸಿದ್ದರೆ, ಯುರೋಪಿನ ಹಿಮಯುಗದ ಜನರು ಪ್ರಾಣಿಗಳ ರಕ್ತ ಮತ್ತು ತತ್ತಿಯ ಬಿಳಿ ಲೋಳೆಯನ್ನು ವರ್ಣ ಬಂಧಕವಾಗಿ ಬಳಸಿಕೊಂಡಿದ್ದಾರೆ. ಇವುಗಳಲ್ಲದೇ ಜೇನುಮೇಣ, ಸಸ್ಯಸಂಬಂಧಿ ಅಂಟು ಎಲುಬಿನೊಳಗಿನ ಜಿಗುಟಾದ ಪದಾರ್ಥ (Marrow) ಕೊಬ್ಬು ಮತ್ತು ಮೂತ್ರವನ್ನು ಸಹಿತ ಉಪಯೋಗಿಸಲಾಗಿದೆ ಎಂಬ ತರ್ಕವಿದೆ. ಈ ಮೇಲಿನ ಬಂಧಕಗಳೇ ರಾಯಚೂರು ಜಿಲ್ಲೆಯ ಗುಹಾ ಚಿತ್ರಗಳಲ್ಲೂ ಬಳಕೆಗೊಂಡಿವೆ.

**ಕುಂಚಗಳು**

ಚಿತ್ರಗಳಿಗೆ ಬಣ್ಣಲೇಪಿಸುವ ಕುಂಚವನ್ನು ಅನೇಕ ವಸ್ತುಗಳಿಂದ ತಯಾರಿಸಿಕೊಂಡಂತೆ ಕಂಡುಬರುವುದು. ಗಿಡದ ಟೊಂಗೆಯ ತುದಿಯನ್ನು ಜಜ್ಜಿ ಎಳೆ, ಎಳೆಯಾಗಿ ಮಾಡಿಕೊಂಡು ಉಪಯೋಗಿಸಿರಬಹುದು. ಇಲ್ಲವೇ ಬೇರೆ ಬೇರೆ ಪ್ರಾಣಿಗಳ ಕೂದಲುಗಳನ್ನು ಒಟ್ಟುಗೂಡಿಸಿ ಕಟ್ಟಿಕೊಂಡು ಬಳಸಿರಬಹುದು. ಅದೇ ರೀತಿ ಕೆಲವು ಸಸ್ಯಗಳಲ್ಲಿರಬಹುದಾದ ನಾರಿನಿಂದ ಇಲ್ಲವೇ 'ಅಪು' ಎಂಬ ಹುಲ್ಲಿನ ಜಾತಿಯ ಸಸ್ಯದಿಂದ

ಮಾಡಲಾದ ಕುಂಚಗಳನ್ನು ಉಪಯೋಗಿಸಿರಬಹುದು. ಇವುಗಳಲ್ಲದೇ ಕೆಲವು ಸಂದರ್ಭದಲ್ಲಿ ಕೈಯಿಂದಲೂ ಬಣ್ಣ ಲೇಪಿಸಿರಬಹುದು ಎನ್ನುವಂತಹ ಸಂಗತಿಗಳನ್ನು ಎಸ್.ಕೆ. ಪಾಂಡೇ, ಕಾರ್ಕಬರ್ನ್, ಪರ್ಶಿಬ್ರೌನ್, ವಿ.ಎಸ್. ವಾಕಣಕರ್ ಮೊದಲಾದ ವಿದ್ವಾಂಸರು ತಿಳಿಸುತ್ತಾರೆ.

**ವರ್ಣಲೇಪನ ವಿಧಾನ**

ಪ್ರಾಗೈತಿಹಾಸಿಕ ಗುಹಾ ಚಿತ್ರಕಾರರ ವರ್ಣಲೇಪನ ವಿಧಾನಗಳನ್ನು ವಿದ್ವಾಂಸರು ಪ್ರಮುಖವಾಗಿ ನಾಲ್ಕು ರೀತಿಯಲ್ಲಿ ಗುರುತಿಸಿದ್ದಾರೆ. ಮೊದಲನೆಯದಾಗಿ ಬಣ್ಣದ ಗಟ್ಟಿಗಳನ್ನು ಬಣ್ಣದ ಕ್ರೇಯಾನ್ ಹಾಗೆ ನೇರವಾಗಿ ಚಿತ್ರ ರಚಿಸಲು ಬಳಸುತ್ತಿದ್ದರು. ಎರಡನೆಯದಾಗಿ, ಬಣ್ಣದ ಗಟ್ಟಿಗಳನ್ನು ಕುಟ್ಟಿ ಪುಡಿ ಮಾಡಿ ಆ ಒಣಪುಡಿಯನ್ನು ಸ್ವಲ್ಪ ಹಸಿಮಾಡಿ ಬೆರಳುಗಳಿಂದ ಬಂಡೆಗೆ ಲೇಪಿಸುತ್ತಿದ್ದರು. ಮೂರನೆಯದಾಗಿ ವರ್ಣವನ್ನು ದ್ರವವಾಗಿ ಮಾಡಿಕೊಂಡು ವಿವಿಧ ರೀತಿಯ ಕುಂಚಗಳಿಂದ ಲೇಪಿಸುತ್ತಿದ್ದರು. ನಾಲ್ಕನೆಯದಾಗಿ ಬಣ್ಣದ ದ್ರವವನ್ನು ಬಾಯಲ್ಲಿ ಹಾಕಿಕೊಂಡು ಊದುತ್ತಿದ್ದರು ಎಂದು ಅಭಿಪ್ರಾಯಪಡಲಾಗಿದೆ.

**೬.೨. ಶಿಷ್ಟಪದ ಭಿತ್ತಿಚಿತ್ರಕಲೆ**

ಶಿಷ್ಟ ಪರಂಪರೆಯ ಭಿತ್ತಿಚಿತ್ರಗಳು ಕರ್ನಾಟಕದಲ್ಲಿ ಮೊದಲಬಾರಿಗೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ಕಂಡುಬರುತ್ತವೆ. ಇವರ ಕಾಲದಲ್ಲಿ ಬಾದಾಮಿ ಮತ್ತು ಐಹೊಳೆಯಲ್ಲಿ ಗುಹಾಲಯಗಳನ್ನು ಕೊರೆದು ಅದರಲ್ಲಿ ವರ್ಣಚಿತ್ರ ರಚಿಸಲಾಗಿದೆ. ಹಾಗೆಯೇ ಸ್ವಾಭಾವಿಕವಾಗಿ ರಚನೆಯಾಗಿರುವ ಶಿಲಾಶ್ರಯಗಳಲ್ಲಿಯೂ ಇವರು ಚಿತ್ರ ರಚನೆ ಮಾಡಿದ್ದಾರೆ. ಇಂತಹ ನಿದರ್ಶನಗಳು ಬಾದಾಮಿಯ ಗುಡ್ಡಗಳಲ್ಲಿ ಕಂಡುಬರುತ್ತವೆ.

ಕ್ರಿ.ಶ. ೮ರಿಂದ ೧೦ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರ ಕಾಲದಲ್ಲಿ ಎಲ್ಲೋರಾ ಗುಹಾಲಯಗಳಲ್ಲಿ ಭಿತ್ತಿಚಿತ್ರ ರಚಿಸಲಾಗಿದೆ. ಹೊಯ್ಸಳರ ಕಾಲದಲ್ಲಿ ಮೂಡುಬಿದಿರೆಯ ಜೈನಬಸದಿ, ಶ್ರವಣಬೆಳಗೊಳದ ಪೋಚವ್ವೆಯ ಬಸದಿ, ಜಕ್ಕನಹಳ್ಳಿಯ ಕಲ್ಲೇಶ್ವರ ದೇವಾಯ, ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ ಅಂಗಡಿಯಲ್ಲಿನ ವಾಸಂತಿಕಾ ದೇವಾಲಯಗಳಲ್ಲಿ ಭಿತ್ತಿಚಿತ್ರ ಬರೆಸಲಾಗಿದೆ.

ಹೊಯ್ಸಳರ ನಂತರ ಭಿತ್ತಿಚಿತ್ರ ಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟ ದೊರೆಗಳೆಂದರೆ ವಿಜಯನಗರ ಅರಸರಾಗಿದ್ದಾರೆ. ಇವರ ಕಾಲದಲ್ಲಿ ರಾಜಧಾನಿ ಹಂಪೆಯಲ್ಲಿ ಮಾತ್ರವಲ್ಲದೆ ಆಂಧ್ರ ಮತ್ತು ತಮಿಳುನಾಡು ಪ್ರದೇಶಗಳ ಅನೇಕ ಸ್ಥಳಗಳಲ್ಲಿ ಭಿತ್ತಿಚಿತ್ರ ರಚನೆ ಮಾಡಲಾಗಿದೆ.

ವಿಜಯನಗರ ಪತನದ ನಂತರ ಅವರ ಸಾಮಂತ ದೊರೆಗಳು ಭಿತ್ತಿಚಿತ್ರಕಲೆಯನ್ನು ಮುಂದುವರೆಸಿದರು. ಮೈಸೂರು ಒಡೆಯರು, ಸುರುಪುರ ನಾಯಕರುಗಳಲ್ಲದೇ ಅನೇಕ ಚಿಕ್ಕ ಪುಟ್ಟ ಸಂಸ್ಥಾನಿಕರೂ ಈ ಕಲಾಪರಂಪರೆಯನ್ನು ಬೆಳೆಸುತ್ತಾ ಬಂದಿದ್ದಾರೆ. ಅವರಲ್ಲಿ ಮುಖ್ಯರಾದವರೆಂದರೆ ಜೀಳಗಿ, ಮುಧೋಳ, ನರಗುಂದ, ರಾಮದುರ್ಗ, ನಿಪ್ಪಾಣಿ, ಸೋದೆ ಸಂಸ್ಥಾನಿಕರು ಇವರಲ್ಲದೇ ಮುಸ್ಲಿಂ ರಾಜರೂ ಕರ್ನಾಟಕದ ಭಿತ್ತಿಚಿತ್ರಕಲೆಗೆ ಅಮೂಲ್ಯ ಕೊಡುಗೆ ಕೊಟ್ಟಿದ್ದಾರೆ. ಬೀದರ್, ಗುಲ್ಬರ್ಗಾ, ವಿಜಾಪುರ ಸುಲ್ತಾನರು ತಮ್ಮ ವಾಸ್ತು ನಿರ್ಮಿತಿಗಳಲ್ಲಿ ಭಿತ್ತಿಚಿತ್ರ ರಚನೆ ಮಾಡಿದ್ದಾರೆ. ಇವರ ಕಾಲದ ಚಿತ್ರಗಳು ಬೀದರಿನ ರಂಗೀನ ಮಹೆಲ್, ಟರ್ಕಿಶ್‌ಮಹಲ್, ಆಸ್ತೂರಿನ ಸಮಾಧಿಗಳು, ಗುಲಬರ್ಗಾದ ಮಸೀದಿಗಳು, ವಿಜಾಪುರದ ದರ್ಗಾಗಳಲ್ಲಿ ಮತ್ತು ಅರಮನೆಗಳಲ್ಲಿ ಕಂಡುಬರುತ್ತವೆ. ನಂತರದ ಸವಣೂರು ನವಾಬರೂ ಭಿತ್ತಿಚಿತ್ರಕಲೆಗೆ ಪ್ರೋತ್ಸಾಹ ಕೊಟ್ಟಿರುವುದು ಮಾತ್ರವಲ್ಲದೇ ತಮ್ಮ ಅರಮನೆಗಳಲ್ಲಿ ಚಿತ್ರರಚನೆ ಮಾಡಿಸಿದ್ದಾರೆ.

ರಾಜಮಹಾರಾಜರು ಸಂಸ್ಥಾನಿಕರು ಮಾತ್ರವಲ್ಲದೇ ಮಠಮಾನ್ಯಗಳು ಸಹಿತ ಭಿತ್ತಿಚಿತ್ರಕಲೆಯನ್ನು ಕರ್ನಾಟಕದಲ್ಲಿ ಬೆಳೆಸಿವೆ. ಅದರಲ್ಲಿ ವೀರಶೈವ ಮಠಗಳ ಪಾತ್ರ ತುಂಬಾ ಮಹತ್ವದ್ದಾಗಿದೆ. ಮಠಗಳ ಪೋಷಣೆಯಲ್ಲಿ ರಚನೆಯಾದ ಭಿತ್ತಿ ಚಿತ್ರಗಳು ಧಾರವಾಡ ಸಮೀಪದ ಅಮ್ಮಿನಭಾವಿಯ ಪಂಚಗೃಹ ಹಿರೇಮಠ, ಮಹಾಲಿಂಗಪುರದ ಮಹಾಲಿಂಗೇಶ್ವರ ಮಠ, ನವಲಗುಂದ ವಿರಕ್ತಮಠ, ಸುರಪುರದ ಅಣ್ಣಯ್ಯನ ಮಠ, ಅಥಣಿಯ ಗಚ್ಚಿನ ಮಠಗಳಲ್ಲಿ ಕಂಡುಬರುತ್ತವೆ.

ಸಮಾಜದಲ್ಲಿನ ಪ್ರತಿಷ್ಠಿತ ವ್ಯಕ್ತಿಗಳು ಸಹಿತ ತಮ್ಮ ಮನೆಗಳಲ್ಲಿ ಭಿತ್ತಿಚಿತ್ರ ಬರೆಸುವ ಮೂಲಕ ಈ ಕಲಾಪ್ರಕಾರದ ಬೆಳವಣಿಗೆಗೆ ಕಾರಣರಾಗಿದ್ದಾರೆ. ಪ್ರತಿಷ್ಠಿತ ವ್ಯಕ್ತಿಗಳು ಬರೆಸಿದ ಚಿತ್ರಗಳು ನರಗುಂದದ ಗುಂಡಪ್ಪ ಹಸಬಿಯವರ ಮನೆ, ಗುಳೇದಗುಡ್ಡದ ಹೊಸಮನಿಗೌಡ್ರಮನೆ, ರಾಯಚೂರಿನ ಖಾಜಿನಗೌಡರ ಮನೆಗಳಲ್ಲಿ ಕಂಡುಬರುತ್ತವೆ. ಹೀಗೆ ಅನೇಕ ಜನರ ಆಸಕ್ತಿ ಮತ್ತು ಪ್ರೋತ್ಸಾಹಗಳಿಂದಾಗಿ ಕರ್ನಾಟಕದಲ್ಲಿ ಭಿತ್ತಿಚಿತ್ರ ರಚನಾ ಪರಂಪರೆ ಶ್ರೀಮಂತವಾಗಿ ಬೆಳೆಯಿತು. ಈ ರೀತಿಯಲ್ಲಿ ಭವ್ಯಪರಂಪರೆ ಹೊಂದಿರುವ ಭಿತ್ತಿಚಿತ್ರ ರಚನಾ ಪ್ರಕ್ರಿಯೆಯಲ್ಲಿ ಭಿತ್ತಿಸಿದ್ಧತೆ ಮಾಡುವುದು ಮಹತ್ವದ ಹಂತವಾಗಿದೆ.

**ಶಿಷ್ಟಪದ ಭಿತ್ತಿಸಿದ್ಧತೆಯ ಪ್ರಕ್ರಿಯೆಗಳು**

ಭಿತ್ತಿಚಿತ್ರ ರಚನೆಯಲ್ಲಿ ಚಿತ್ರ ರಚಿಸಬೇಕಾದ ಆಧಾರಕ್ಕೆ ಒಂದು ರೀತಿಯ ಮಿಶ್ರಣ ಲೇಪಿಸಿ ಅದರ ಮೇಲೆ ಚಿತ್ರ ರಚಿಸಲಾಗಿರುತ್ತದೆ. ಈ ರೀತಿ ಮಿಶ್ರಣ ತಯಾರಿಸಿ ಲೇಪಿಸಿ ಚಿತ್ರಣಕ್ಕೆ

ಅಣಿಗೊಳಿಸುವ ಪ್ರಕ್ರಿಯೆಯನ್ನೇ ಭಿತ್ತಿಸಿದ್ಧತೆ ಮಾಡುವುದು ಎನ್ನಲಾಗುತ್ತದೆ. ಭಿತ್ತಿಸಿದ್ಧಗೊಳಿಸುವಲ್ಲಿ ಪ್ರಮುಖವಾಗಿ ಎರಡು ವಿಧಾನಗಳಿದ್ದು ಒಂದು ಮಣ್ಣಿನ ಭಿತ್ತಿಯಾದರೆ, ಇನ್ನೊಂದು ಗಾರೆಭಿತ್ತಿ ತಯಾರಿಕೆಯಾಗಿದೆ. ಮಣ್ಣಿನ ಭಿತ್ತಿಯಲ್ಲಿ ಜಿಗುಟಾದ ಜೇಡಿಮಣ್ಣು ಪ್ರಧಾನವಾದರೆ, ಗಾರೆ ಭಿತ್ತಿಯಲ್ಲಿ ಸುಣ್ಣ ಉಸುಕುಗಳು ಪ್ರಧಾನವಾಗಿರುತ್ತವೆ.

ಭಿತ್ತಿ ಸಿದ್ಧತೆಗೊಳಿಸುವ ಕ್ರಿಯೆ ಒಂದೇ ಹಂತದಲ್ಲಿ ಪೂರ್ಣಗೊಳ್ಳದೇ ಪ್ರಮುಖವಾದ ನಾಲ್ಕು ಹಂತಗಳಲ್ಲಿ ನಡೆಯುತ್ತದೆ. ಮೊದಲ ಹಂತದಲ್ಲಿ ಆಧಾರವನ್ನು ಸಂಸ್ಕರಿಸಿಕೊಳ್ಳಲಾಗುತ್ತದೆ. ಎರಡನೆಯ ಹಂತದಲ್ಲಿ ಅನೇಕ ಬಗೆಯ ವಸ್ತುಗಳನ್ನು ಕೂಡಿಸಿ ಮಿಶ್ರಣ ತಯಾರಿಸಿ ಅದನ್ನು ಆಧಾರಕ್ಕೆ ಲೇಪಿಸಲಾಗುವುದು. ಮೂರನೆಯ ಹಂತದಲ್ಲಿ ಲೇಪಿಸಿದ ಮಿಶ್ರಣವನ್ನು ವಿವಿಧ ಅಂಟುದ್ರಾವಕಗಳಿಂದ ತಿಕ್ಕಿ ನುಣುಪುಗೊಳಿಸಿದರೆ, ನಾಲ್ಕನೆಯ ಹಂತದಲ್ಲಿ ನುಣುಪುಗೊಳಿಸಿದ ಭಿತ್ತಿಗೆ ಸುಣ್ಣದ ಹಿನ್ನೆಲೆ ಲೇಪಿಸಿ ಚಿತ್ರ ಬರೆಯಲು ಅಣಿಗೊಳಿಸುವುದು ಇಲ್ಲಿ ಕಂಡುಬರುತ್ತದೆ.

**ಶಿಷ್ಟಪದ ಭಿತ್ತಿಚಿತ್ರಕಲೆಯ ಪರಿಕರಗಳು**

ಭಿತ್ತಿಚಿತ್ರ ರಚನೆಗಾಗಿ ಅನೇಕ ಬಗೆಯ ಪರಿಕರಗಳು ಅಗತ್ಯವಿದ್ದು ಅವುಗಳನ್ನು ಭಿತ್ತಿ ನಿರ್ಮಾಣ ಪರಿಕರಗಳ ಮತ್ತು ಭಿತ್ತಿಚಿತ್ರ ರಚನಾ ಪರಿಕರಗಳೆಂಬುದಾಗಿ ವಿಂಗಡಿಸಬಹುದಾಗಿದೆ. ಭಿತ್ತಿ ನಿರ್ಮಾಣ ಪರಿಕರಗಳಲ್ಲಿ ಭಿತ್ತಿ ತಯಾರಿಕೆಯಲ್ಲಿ ಒಳಗೊಳ್ಳುವ ಎಲ್ಲಾ ವಸ್ತುಗಳೂ ಬರುತ್ತವೆ. ಇಲ್ಲಿ ಪ್ರಮುಖವಾಗಿ ಮಣ್ಣು, ಕಲ್ಲಿನಪುಡಿ, ಉಸುಕು, ಸುಣ್ಣ, ನಾರುಪದಾರ್ಥ, ಶಂಖಚೂರ್ಣ, ಇಟ್ಟಿಗೆ ಪುಡಿ, ವಜ್ರಲೇಪ, ಮರದಂಟು, ವಿವಿಧ ಗಿಡದ ರಸ, ಬಾಳೆಹಣ್ಣು, ಕಾಕಂಬಿ, ಜೇನುಮೇಣ ಮುಂತಾದ ವಸ್ತುಗಳನ್ನು ಭಿತ್ತಿ ನಿರ್ಮಾಣ ಹಂತದಲ್ಲಿ ಬಳಸಲಾಗುತ್ತದೆ.

ಭಿತ್ತಿಚಿತ್ರ ರಚನಾ ಪರಿಕರಗಳಲ್ಲಿ ಮುಖ್ಯವಾಗಿ ವರ್ತಿಕಾ (ಸೀಸಕಡ್ಡಿ), ಬಣ್ಣ, ಅಂಟುದ್ರಾವಕ, ಬಣ್ಣಮಿಶ್ರಗೊಳಿಸುವ ತಟ್ಟೆ ಮತ್ತು ಕುಂಚಗಳು ಉಪಯೋಗಿಸಲ್ಪಡುತ್ತವೆ. ಭಿತ್ತಿ ಚಿತ್ರ ರಚನೆಯಲ್ಲಿ ಮೊದಲಿಗೆ ಆಕೃತಿಗಳನ್ನು ವರ್ತಿಕಾದಿಂದಲೇ ಚಿತ್ರಿಸಿಕೊಳ್ಳುತ್ತಿದ್ದರು. ಈ ವರ್ತಿಕಾಗಳನ್ನು ಕಟ್ಟಿಗೆ ಸುಟ್ಟ ಇದ್ದಿಲುಗಳಿಂದ ಸಾಮಾನ್ಯವಾಗಿ ಪಡೆಯುತ್ತಿದ್ದರೂ ಕೆಲವು ಸಲ ಕಪ್ಪುಕಾಡಿಗೆ, ಧಾನ್ಯದ ಹಿಟ್ಟು, ಕಲ್ಲಿನಪುಡಿ, ಇಟ್ಟಿಗೆ ಪುಡಿ, ಜೇಡಿಮಣ್ಣು ಮತ್ತು ವಜ್ರಸರಿ ಇವುಗಳನ್ನು ಮಿಶ್ರಗೊಳಿಸಿ ತಯಾರಿಸಿ ಕಡ್ಡಿಗಳನ್ನು ಸುಟ್ಟು ಅದರಿಂದಲೂ ವರ್ತಿಕಾಗಳನ್ನು ತಯಾರಿಸಿಕೊಳ್ಳುತ್ತಿದ್ದರು.

ಬಣ್ಣಗಳನ್ನು ಖನಿಜಮೂಲ, ಪ್ರಾಣಿಮೂಲ, ಸಸ್ಯಮೂಲ ಮತ್ತು ಲೋಹಮೂಲಗಳಿಂದ ಪಡದುಕೊಳ್ಳುತ್ತಿದ್ದರಲ್ಲದೇ ಕ್ರಿ.ಶ. ೧೮ನೇ ಶತಮಾನದ ಈಚೆಗೆ ರಾಸಾಯನಿಕ ಬಣ್ಣಗಳನ್ನು ಭಿತ್ತಿ ಚಿತ್ರ ರಚನೆಯಲ್ಲಿ ಬಳಸಲಾರಂಭಿಸಿದರು. ಖನಿಜ ಮೂಲದ ಬಣ್ಣಗಳಲ್ಲಿ ಬೇರೆ ಬೇರೆ ಬಣ್ಣದ ಕಲ್ಲು, ಮಣ್ಣು ಅದಿರುಗಳಿಂದ ಬಣ್ಣ ತಯಾರಿಸಿಕೊಳ್ಳುತ್ತಿದ್ದರು. ಪ್ರಾಣಿ ಮೂಲ ಬಣ್ಣಗಳಲ್ಲಿ ಪ್ರಾಣಿಗಳ ರಕ್ತ, ಕೊಬ್ಬು, ವಿವಿಧ ಜಾತಿಯ ಕೀಟಗಳನ್ನು ಸಂಸ್ಕರಿಸಿ ಬಣ್ಣ ಪಡೆದುಕೊಳ್ಳುತ್ತಿದ್ದರು. ಸಸ್ಯಮೂಲ ಬಣ್ಣಗಳಲ್ಲಿ ಬೇರೆ ಬೇರೆ ಸಸ್ಯಗಳ ಎಲೆ, ಹೂ, ಹಣ್ಣು, ಕಾಂಡ, ಬೇರುಗಳಿಂದ ಬಣ್ಣ ತಯಾರಿಸಿಕೊಂಡು ಚಿತ್ರ ರಚಿಸುತ್ತಿದ್ದರು. ಲೋಹ ಮೂಲದ ಬಣ್ಣಗಳಲ್ಲಿ ವಿವಿಧ ಲೋಹಗಳನ್ನು ಕಾಯಿಸುವುದು, ಕರಗಿಸುವುದು ಮತ್ತು ತೇಯುವ ಮೂಲಕ ಬಣ್ಣ ಪಡೆಯುತ್ತಿದ್ದರಲ್ಲದೇ ಲೋಹದ ಹಾಳೆಗಳನ್ನು ತೆಳುವಾಗಿ ಬಡಿದು ಅದನ್ನೇ ಕತ್ತರಿಸಿ ಚಿತ್ರದ ಭಾಗಗಳಿಗೆ ಅಂಟಿಸುತ್ತಿದ್ದರು. ಇಲ್ಲವೇ ಕುಟ್ಟಿ ಪುಡಿ ಮಾಡಿ ಆಲೋಹದ ಪುಡಿಯನ್ನು ಅಂಟು ದ್ರಾವಣದಲ್ಲಿ ಕಲಿಸಿ ಚಿತ್ರಗಳಿಗೆ ಲೇಪಿಸುತ್ತಿದ್ದರು. ವರ್ಣವನ್ನು ಪಡೆಯುತ್ತಿದ್ದ ಪ್ರಮುಖ ಲೋಹಗಳೆಂದರೆ ಕಬ್ಬಿಣ, ತಾಮ್ರ, ಸತುವು, ಅಲ್ಯುಮಿನಿಯಂ, ಬೆಳ್ಳಿ ಬಂಗಾರಗಳಾಗಿವೆ.

ಬಣ್ಣಗಳನ್ನು ಮಿಶ್ರ ಮಾಡಿಕೊಳ್ಳಲು ಅನೇಕ ಬಗೆಯ ಅಂಟುದ್ರಾವಕಗಳನ್ನು ಪ್ರಾಚೀನರು ಉಪಯೋಗಿಸುತ್ತಿದ್ದರು. ಅವುಗಳಲ್ಲಿ ಪ್ರಾಣಿಜನ್ಯ, ಸಸ್ಯಜನ್ಯ ಮತ್ತು ಖನಿಜಜನ್ಯವಾದ ಅಂಟುಗಳು ಸೇರಿವೆ. ಪ್ರಾಣಿಜನ್ಯ ಅಂಟುಗಳಲ್ಲಿ ವಜ್ರಸರಿ, ಪ್ರಾಣಿಗಳ ರಕ್ತ ಎಲುಬಿನೊಳಗಿನ ಜಿಗಟು ಪದಾರ್ಥ, ಕೊಬ್ಬು, ಹಾಲಿನಕೆನೆ, ತತ್ತಿಯ (ಮೊಟ್ಟೆ) ಲೋಳೆ ಪದಾರ್ಥಗಳನ್ನು ಉಪಯೋಗಿಸುತ್ತಿದ್ದರು. ವಜ್ರಸರಿಯನ್ನು ಕೋಣ, ಎಮ್ಮೆ, ಎತ್ತು, ಆಕಳುಗಳ ಚರ್ಮ, ಕೋಡುಗಳನ್ನು ಕುದಿಸುವ ಮೂಲಕ ತಯಾರಿಸಿಕೊಳ್ಳುತ್ತಿದ್ದರು.

ಸಸ್ಯಜನ್ಯ ಅಂಟುಗಳಲ್ಲಿ ವಿವಿಧ ಬಗೆಯ ಗಿಡ ಕಾಯಿ, ಹೂ, ಹಣ್ಣು, ಎಲೆ, ಕಾಂಡಗಳಿಂದ ಪಡೆದ ಅಂಟುಗಳನ್ನು ಉಪಯೋಗಿಸುತ್ತಿದ್ದರು. ಖನಿಜ ಜನ್ಯ ಅಂಟುಗಳಲ್ಲಿ ಸುಣ್ಣ ಮತ್ತು ಸುಣ್ಣದ ಅಂಶಗಳನ್ನು ಒಳಗೊಂಡ ಅದಿರಿನ ಬಣ್ಣಗಳು ಸೇರಿವೆ. ಬಣ್ಣಗಳನ್ನು ಕಲಸಿಕೊಳ್ಳಲು ತಟ್ಟೆಗಳ ಅವಶ್ಯಕತೆ ಇದ್ದು ಪ್ರಾಚೀನರು ಕಲ್ಲಿನ ತಗ್ಗು ಇಲ್ಲವೆ, ಕುಳಿಗಳನ್ನು ಪ್ರಾರಂಭದಲ್ಲಿ ಬಣ್ಣ ಕಲಸಲು ಬಳಸಿದ್ದಾರೆ. ನಂತರದಲ್ಲಿ ಎಲುಬಿನ ಟೊಳ್ಳುಭಾಗ, ಎಲೆಗಳಿಂದ ಮಾಡಿದ ಡೊಣ್ಣೆಗಳು, ಬಿದಿರಿನ ಕೊಳವೆಗಳು, ತೆಂಗಿನ ಚಿಪ್ಪು ಮತ್ತು ಮಣ್ಣಿನ ಪಾತ್ರೆಗಳನ್ನು ಬಳಸಿದಂತೆ ತಿಳಿದುಬರುತ್ತದೆ.

ಪ್ರಾಚೀನರು ಅನೇಕ ಬಗೆಯ ಕುಂಚಗಳಿಂದ ಬಣ್ಣ ಲೇಪಿಸಿದ್ದಾರೆ. ತೀರಾ ಮೊದಲಿಗೆ ಪ್ರಾಣಿಗಳ ಕೂದಲು, ಇಲ್ಲವೇ ಸಸ್ಯದ ಕಾಂಡವನ್ನು ಜಜ್ಜಿ ಎಳೆ ಎಳೆಯಾಗಿ ಮಾಡಿಕೊಂಡು ಕುಂಚಗಳಾಗಿ

ಉಪಯೋಗಿಸಿದ್ದಾರೆ. ಜೊತೆಗೆ ಹುಲ್ಲಿನ ಗರಿಕೆಗಳನ್ನು ಒಟ್ಟಾಗಿ ಕಟ್ಟಿ ಮತ್ತು ಪ್ರಾಣಿಗಳ ಚರ್ಮವನ್ನು ಕಟ್ಟಿಗೆಯ ತುದಿಗೆ ಸುತ್ತಿ ಅವುಗಳಿಂದ ಬಣ್ಣ ಲೇಪಿಸಿದ್ದಾರೆ. ಈ ಕುಂಚಗಳಲ್ಲಿ ಸ್ಥೂಲ, ಮಧ್ಯಮ, ಸೂಕ್ಷ್ಮ ಎಂಬ ಬಗೆಗಳಿದ್ದವಲ್ಲದೇ ದುಂಕು, ಚಪ್ಪಲೆ ಹೀಗೆ ಬೇರೆ ಬೇರೆ ಆಕಾರಗಳೂ ಇದ್ದವು. ಕುಂಚಗಳ ಪ್ರಕಾರಗಳು ಅವುಗಳ ತಯಾರಿಕೆ, ಉಪಯೋಗ ಮುಂತಾದ ಸಂಗತಿಗಳ ಬಗ್ಗೆ ಪ್ರಾಚೀನ ಶಿಲ್ಪಶಾಸ್ತ್ರಗಳು ವಿವರವಾಗಿ ಚರ್ಚಿಸಿವೆ. ಈ ರೀತಿಯ ಅನೇಕ ಪರಿಕರಗಳನ್ನು ಬಳಸಿಕೊಂಡು ನಿರ್ದಿಷ್ಟ ವಿಧಾನದಲ್ಲಿ ಭಿತ್ತಿ ಚಿತ್ರ ರಚನೆಯನ್ನು ಪ್ರಾಚೀನರು ಮಾಡುತ್ತಿದ್ದು, ಚಿತ್ರರಚನಾ ವಿಧಾನವನ್ನು ಸ್ಥೂಲವಾಗಿ ಈ ಮುಂದಿನಂತೆ ಗಮನಿಸಬಹುದು.

**ಶಿಷ್ಟಪದ ಭಿತ್ತಿಚಿತ್ರರಚನಾ ವಿಧಾನಗಳು**

ಭಿತ್ತಿಚಿತ್ರ ರಚನೆಯಲ್ಲಿ ಪ್ರಮುಖವಾಗಿ ಭಿತ್ತಿ ಹಸಿ ಇರುವಾಗ ಚಿತ್ರ ರಚಿಸುವ ಫ್ರೆಸ್ಕೋಬ್ಯುನೇ ಮತ್ತು ಭಿತ್ತಿ ಒಣಗಿದ ನಂತರ ಚಿತ್ರ ರಚಿಸುವ ಫ್ರೆಸ್ಕೋ ಸೆಕ್ಕೋ ಎಂಬ ಎರಡು ವಿಧಾನಗಳು ಪ್ರಚಲಿತದಲ್ಲಿದ್ದರೂ, ಅತೀ ಹೆಚ್ಚಿನ ಚಿತ್ರಗಳನ್ನು ಭಾರತದಲ್ಲಿ ಭಿತ್ತಿ ಒಣಗಿದ ನಂತರ ಚಿತ್ರಿಸಲಾಗಿದೆ. ಅಂತೆಯೇ ಕರ್ನಾಟಕದಲ್ಲಿಯೂ ಸಾಮಾನ್ಯವಾಗಿ ಕಾವಿ ಭಿತ್ತಿಚಿತ್ರಗಳನ್ನು ಹೊರತುಪಡಿಸಿ ಇನ್ನಿತರ ಭಿತ್ತಿಚಿತ್ರಗಳನ್ನು ಭಿತ್ತಿ ಒಣಗಿದ ನಂತರವೇ ಚಿತ್ರಿಸಲಾಗಿದೆ.

ಭಿತ್ತಿ ಹಸಿ ಇರುವಾಗ ಚಿತ್ರ ರಚನೆ ಮಾಡುವ ವಿಧಾನ ಕಠಿಣವಾಗದ್ದು, ಒಂದು ದಿನದಲ್ಲಿ ಎಷ್ಟು ಭಾಗದಲ್ಲಿ ಚಿತ್ರರಚನೆ ಮಾಡಬಲ್ಲರೋ ಅಷ್ಟೇ ಪ್ರಮಾಣದ ಭಿತ್ತಿಯನ್ನು ಲೇಪಿಸಿಕೊಳ್ಳಬೇಕು. ಇಲ್ಲವೇ ನಿರ್ಮಿಸಿದ ಭಿತ್ತಿಯು ಮರುದಿನದ ಚಿತ್ರರಚನೆಗೆ ಹಸಿ ಇರುವಂತೆ ನೋಡಿಕೊಳ್ಳಬೇಕು. ಭಾರತದಂತಹ ಉಷ್ಣ ಪ್ರದೇಶದಲ್ಲಿ ಈ ಪದ್ಧತಿಯನ್ನು ಅನುಸರಿಸುವುದು ಕಷ್ಟಸಾಧ್ಯವಾಗಿರುವುದರಿಂದ ಇಲ್ಲಿ ಹೆಚ್ಚಾಗಿ ಒಣ ಭಿತ್ತಿಯ ಮೇಲೆಯೇ ಚಿತ್ರ ರಚನೆ ಮಾಡಲಾಗಿದೆ. ರಾಯಚೂರಿನ ಗೌಡರಮನೆ ಮತ್ತು ಆಂಜನೇಯ ದೇವಾಲಯದ ಚಿತ್ರಗಳು ಭಿತ್ತಿ ಒಣಗಿದ ನಂತರ ರಚನೆಗೊಂಡಿವೆ.

ಭಿತ್ತಿಚಿತ್ರಕಾರರು ಚಿತ್ರರಚನೆಯನ್ನು ಒಮ್ಮೆಲೇ ಪ್ರಾರಂಭಿಸದೇ ಚಿತ್ರಗಳ ಪ್ರಮಾಣ, ಅಳತೆ, ಸೂತ್ರಗಳು, ನವಸ್ಥಾನಗಳು ಮತ್ತು ಚಿತ್ರಕಲೆಯ ಷಡಂಗಗಳ ಬಗೆಗೆ ಮನವರಿಕೆ ಮಾಡಿಕೊಂಡು ನಂತರ ಚಿತ್ರ ರಚಿಸುತ್ತಿದ್ದರು. ದೇವತೆಗಳ ಚಿತ್ರಗಳ ಪ್ರಮಾಣಗಳೇನು, ಮಾನವರ ಚಿತ್ರದ ಅಳತೆಗಳಾವುವು, ಪ್ರಾಣಿ, ಪಕ್ಷಿಗಳನ್ನು, ಯಾವ ಅಳತೆಯಲ್ಲಿ ರಚಿಸಬೇಕು. ಅಲ್ಲದೇ ಚಿತ್ರಗಳು ಯಾವ ಕಡೆಗೆ, ಯಾವ ಕೋನದಲ್ಲಿ ತಿರುಗಿಕೊಂಡಿರಬೇಕು ಎಂಬಂತಹ ವಿಚಾರಗಳನ್ನು ಮನದಟ್ಟು ಮಾಡಿಕೊಂಡು

ಅವುಗಳಿಗನುಸಾರವಾಗಿಯೇ ಚಿತ್ರ ರಚನೆ ಮಾಡುತ್ತಿದ್ದರು. ಚಿತ್ರರಚನೆ ಮಾಡುವಲ್ಲಿಯೂ ಲೇಖ್ಯಕರ್ಮ, ರೇಖಾಕರ್ಮ, ವರ್ಣಕರ್ಮ, ವರ್ತನಕರ್ಮ, ಲೇಖನಕರ್ಮ, ದ್ವಿಕರ್ಮ ಎಂಬ ಆರು ಹಂತಗಳಲ್ಲಿ ಚಿತ್ರ ಪೂರ್ತಿಗೊಳಿಸುತ್ತಿದ್ದರು.

ಲೇಖ್ಯಕರ್ಮ ಎಂದರೆ ಭಿತ್ತಿಯ ಮೇಲೆ ಸೀಸದ ಕಡ್ಡಿಯಿಂದ ಚಿತ್ರದ ಪ್ರಾಥಮಿಕ ರೇಖೆಗಳನ್ನು ಹಾಕಿಕೊಳ್ಳುವುದಾಗಿದೆ. ರೇಖಾಕರ್ಮವೆಂದರೆ, ಸೀಸಕಡ್ಡಿಯ ರೇಖೆಗಳ ಮೇಲೆ ಮತ್ತೆ ಕೆಂಪು ಇಲ್ಲವೇ ಹಳದಿ ವರ್ಣಗಳಿಂದ ರೇಖೆಗಳನ್ನು ಎಳೆಯುವುದಾಗಿದೆ. ವರ್ಣಕರ್ಮವು ಚಿತ್ರಗಳಿಗೆ ಬಣ್ಣ ಲೇಪಿಸುವ ಹಂತವಾಗಿದ್ದು ವರ್ತನಕರ್ಮವು ಚಿತ್ರಗಳಿಗೆ ನೆರಳು ಬೆಳಕಿನ ವಿನ್ಯಾಸ ಮಾಡುವುದಾಗಿದೆ. ಐದನೆಯದಾದ ಲೇಖನಕರ್ಮವು, ಚಿತ್ರರಚನೆಯ ನಂತರ ಬಣ್ಣದಿಂದ ಚಿತ್ರಗಳಿಗೆ ಹೊರ ರೇಖೆ ಎಳೆಯುವುದಾಗಿದೆ. ಆರನೆಯದಾದ ದ್ವಿಕರ್ಮ ಹಂತವು ಚಿತ್ರದ ಮುಕ್ತಾಯಕ್ಕೆ ಕಣ್ಣಿನ ಹೊಳಪು, ಆಭರಣಗಳ ಮಿಂಚುವಿಕೆ, ಬೆಳಕಿನ ಹೊಳೆಯುವ ಭಾಗಗಳನ್ನು ಗುರುತಿಸಿ ಚಿತ್ರಿಸುವುದಾಗಿದೆ. ಈ ರೀತಿ ಭಿತ್ತಿಚಿತ್ರ ಕಲಾವಿದರು ಹಂತ ಹಂತವಾಗಿ ಚಿತ್ರರಚನೆ ಮಾಡುತ್ತಿದ್ದರು.

**ಶಿಷ್ಟಪದ ಭಿತ್ತಿಚಿತ್ರ ರಚನಾ ಮಾಧ್ಯಮಗಳು**

ಭಿತ್ತಿಚಿತ್ರಗಳನ್ನು ಗೋಡೆ ಮತ್ತು ಮೇಲ್ಛಾವಣಿಗೆ ಲೇಪಿಸಿದ ಗಾರೆ ಲೇಪನದ ಮೇಲೆ ಸಾಮಾನ್ಯವಾಗಿ ರಚಿಸುತ್ತಲಿದ್ದರೂ ಇದರ ಜೊತೆಗೇ ಗೋಡೆ ಮತ್ತು ಮೇಲ್ಛಾವಣಿಗಳಲ್ಲಿ ಅಳವಡಿಸಿದ ಮರ, ಲೋಹ, ಕಲ್ಲು, ಗಾಜು ಮಾಧ್ಯಮಗಳ ಮೇಲೂ ಭಿತ್ತಿಚಿತ್ರ ರಚನೆ ಮಾಡಿರುವುದು ಕಂಡುಬರುತ್ತದೆ. ಇಂತಹ ಉದಾಹರಣೆಗಳು ಕರ್ನಾಟಕದಲ್ಲಿಯೂ ದೊರಕುತ್ತವೆ. ರಾಯಚೂರಿನ ಖಾಜನಗೌಡರ ಮನೆಯಲ್ಲಿ ಗೋಡೆ, ಮೇಲ್ಛಾವಣಿ ಮತ್ತಿತರ ಮರ ಮಾಧ್ಯಮಗಳ ಮೇಲೆ ಚಿತ್ರರಚನೆ ಮಾಡಲಾಗಿದೆ. ಅದರಂತೆ ಇದೆ ಊರಿನ ಆಂಜನೇಯ ದೇವಾಲಯದಲ್ಲಿಯೂ ಗೋಡೆ, ಛಾವಣಿ ಮತ್ತು ಮರದ ತೊಲೆಗಳ ಮೇಲೆ ಭಿತ್ತಿಚಿತ್ರ ರಚಿಸಲಾಗಿದೆ.

ಹೀಗೆ ಪ್ರಾಗ್ಯೆತಿಹಾಸಿಕ ಮತ್ತು ಶಿಷ್ಟಪದ ಭಿತ್ತಿಚಿತ್ರಗಳ ಅರ್ಥ, ಸ್ವರೂಪ, ವೈವಿಧ್ಯತೆ, ರಚನಾ ಮಾಧ್ಯಮ, ತಂತ್ರ, ಶೈಲಿ ಮುಂತಾದ ಅಂಶಗಳನ್ನು ವಿಶ್ಲೇಷಿಸುವ ಪ್ರಯತ್ನ ಈ ಅಧ್ಯಾಯದಲ್ಲಿ ಮಾಡಲಾಗಿದೆ.

□□□

## ಅಧ್ಯಾಯ – ಏಳು

# ಸಮಾರೋಪ

ಭಿತ್ತಿಚಿತ್ರಕಲೆಯು ಪ್ರಾಚೀನ ಕಾಲದಿಂದ ಸಂಸ್ಕೃತಿಯ ಒಂದು ಅಂಗವಾಗಿ ಬೆಳೆದುಬಂದಿರುವುದರ ಜೊತೆಗೆ ಮಾನವನ ಭಾವನಾತ್ಮಕ ಅಭಿವ್ಯಕ್ತಿ ಹಾಗೂ ಸೌಂದರ್ಯದ ಪರಿಕಲ್ಪನೆಗಳ ತುಡಿತಗಳನ್ನು ಬಿಂಬಿಸುತ್ತ ಬಂದಿದೆ. ಅತ್ಯಂತ ಪ್ರಾಚೀನ ಕಲಾ ಪ್ರಕಾರಗಳಲ್ಲಿ ಒಂದಾದ ಭಿತ್ತಿಚಿತ್ರಕಲೆಯ ಅಧ್ಯಯನದಿಂದ ಮಾನವ ಸಂಸ್ಕೃತಿಕಯ ಬೆಳವಣಿಗೆ, ಐತಿಹಾಸಿಕತೆ, ಸಾಮಾಜಿಕ ಸ್ಥಿತ್ಯಂತರಗಳು ಮತ್ತು ಕಲೆಯ ಮೌಲ್ಯಗಳಂತಹ ಸಂಗತಿಗಳು ತಿಳಿದುಬರುತ್ತವೆ ಎಂಬುದನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಯಿತು.

ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ ಎಂಬ ಶೀರ್ಷಿಕೆಯ ಈ ಪ್ರಬಂಧದಲ್ಲಿ ಆರು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಕಂಡುಕೊಂಡ ಕೆಲವು ಫಲಿತವನ್ನು ಸಂಕ್ಷಿಪ್ತವಾಗಿ ಕೆಳಗಿನಂತೆ ಹೇಳಲಾಗಿದೆ.

**ಮೊದಲನೆಯ** ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ ಕುರಿತಾಗಿದೆ. ಇದರಲ್ಲಿ ಮೊದಲಿಗೆ ಅಧ್ಯಯನದ ಉದ್ದೇಶಗಳು, ಅದರ ಮಹತ್ವ ಹಾಗೂ ಕಲಾಕ್ಷೇತ್ರಕ್ಕೆ ಅದರಿಂದುಂಟಾಗುವ ಪ್ರಯೋಜನೆಗಳ ಬಗ್ಗೆ ವಿವರಿಸಲಾಗಿದೆ. ಪ್ರಾಚೀನ ಕಾಲದಿಂದ ಮಾನವನ ಸಂಸ್ಕೃತಿಯ ಭಾಗವಾಗಿ ಬೆಳೆದುಬಂದ ಭಿತ್ತಿಚಿತ್ರಕಲೆಯ ಅಧ್ಯಯನದಿಂದ ಕಂಡುಕೊಳ್ಳಬಹುದಾದ ಸಂಗತಿಗಳ ಬಗ್ಗೆ ಇಲ್ಲಿ ತಿಳಿಸಲಾಗಿದೆ. ಕಲೆಯ ದೃಷ್ಟಿಯಿಂದ ಮಾತ್ರವಲ್ಲದೆ ಐತಿಹಾಸಿಕವಾಗಿ,

ಸಾಮಾಜಿಕವಾಗಿ, ಧಾರ್ಮಿಕವಾಗಿ, ಸೌಂದರ್ಯಾತ್ಮಕವಾಗಿ ಕಾಲಕಾಲಕ್ಕೆ ಎಂತಹ ಪರಿಣಾಮಗಳನ್ನು ಭಿತ್ತಿಚಿತ್ರ ಕಲಾ ಪ್ರಕಾರವು ಉಂಟುಮಾಡುತ್ತ ಬಂದಿತೆಂಬುದನ್ನು ಇಂತಹ ಅಧ್ಯಯನಗಳಿಂದ ಕಂಡುಕೊಳ್ಳುವ ಪ್ರಯತ್ನಗಳ ಕುರಿತಾಗಿ ಇಲ್ಲಿ ತಿಳಿಸಲಾಗಿದೆ. ಒಟ್ಟಾರೆ ಅಧ್ಯಯನದ ಮಹತ್ವ, ಉದ್ದೇಶಗಳು, ವಿಧಾನ ಹಾಗೂ ವ್ಯಾಪ್ತಿಗಳ ಬಗ್ಗೆ ಮೊದಲನೆಯ ಅಧ್ಯಾಯದಲ್ಲಿ ವಿವರಗಳಿವೆ.

**ಎರಡನೆಯ** ಅಧ್ಯಾಯವು ರಾಯಚೂರು ಜಿಲ್ಲೆಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ನೆಲೆ-ಹಿನ್ನೆಲೆಯನ್ನು ಒಳಗೊಂಡಿದೆ. ಇದರಲ್ಲಿ ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಕಲೆಯ ಕುರಿತು ಹೇಳುತ್ತ, ಈ ಪ್ರದೇಶದ ನಾಗರಿಕ ಬದುಕು, ಇಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳು, ಅವರು ನೀಡಿದ ಕಲಾ ಕೊಡುಗೆಗಳು, ಕಲೆಗೆ ಪ್ರೋತ್ಸಾಹ ನೀಡಿದ ಇನ್ನಿತರ ಜನಸಾಮಾನ್ಯರ ಬಗ್ಗೆ ಹೇಳಲಾಗಿದೆ. ಮೌರ್ಯಕಾಲದಿಂದ ಈ ಭಾಗದಲ್ಲಿ ರಾಜಾಶ್ರಯದ ಕಲಾಬೆಳವಣಿಗೆ ಆರಂಭವಾಯಿತು. ಜಿಲ್ಲೆಯಲ್ಲಿ ಅಶೋಕನ ಶಿಲಾಶಾಸನಗಳು ಲಭ್ಯವಾಗಿದ್ದು, ಅವುಗಳಲ್ಲಿ ಕಲೆಯ ಅಂಶಗಳಿವೆ. ನಂತರದ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಸಾಮ್ರಾಟರು, ಬಹುಮನಿ ಸುಲ್ತಾನರ ಕಾಲಗಳಲ್ಲಿ ವಿವಿಧ ರೀತಿಯ ಕಲಾಪ್ರಕಾರಗಳು ಈ ಭಾಗಗಳಲ್ಲಿ ಬೆಳೆದುಬಂದವು. ವಿಜಯನಗರ ಪತನದ ನಂತರ ಸಂಸ್ಥಾನಿಕರು, ಪಾಳೆಗಾರರು, ಸ್ಥಳೀಯ ನಾಯಕರು, ಅಧಿಕಾರಿಗಳು, ಊರಿನ ಗೌಡರು, ಶ್ರೀಮಂತ ವ್ಯಕ್ತಿಗಳು ಈ ಪ್ರದೇಶದ ಕಲೆಯ ಬೆಳವಣಿಗೆ ನೀಡಿರುವ ಕೊಡುಗೆಗಳನ್ನು ಕುರಿತು, ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈ ಮೂಲಕ ಕಲಾ ಕ್ಷೇತ್ರಕ್ಕೆ ರಾಯಚೂರು ಜಿಲ್ಲೆಯ ಕೊಡುಗೆ ಏನೆಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಮೂರನೆಯ** ಅಧ್ಯಾಯವು ಭಿತ್ತಿಚಿತ್ರಕಲೆಯ ಅರ್ಥ, ಸ್ವರೂಪ ಮತ್ತು ಪರಂಪರೆಯ ಕುರಿತಾದದ್ದು. ಇಲ್ಲಿ ಭಿತ್ತಿಚಿತ್ರಕಲೆಯನ್ನು ವಿದೇಶಿಯರು ಮತ್ತು ಭಾರತೀಯರು ಅರ್ಥೈಸಿದ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ. ಮತ್ತು ಭಿತ್ತಿಚಿತ್ರಗಳ ಸ್ವರೂಪದ ಕುರಿತು ಭಿತ್ತಿಚಿತ್ರ ಕಲಾಪರಂಪರೆಯ ಬೆಳವಣಿಗೆಯ ಹಿನ್ನೆಲೆಯನ್ನು ಸ್ಥೂಲವಾಗಿ ನಿರೂಪಿಸಲಾಗಿದೆ.

**ನಾಲ್ಕನೆಯ** ಅಧ್ಯಾಯವು ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆ ಎಂಬುದಾಗಿದೆ. ಇದರಲ್ಲಿ ಇಂದಿನ ರಾಯಚೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ನೆಲಗಳನ್ನು ಶೋಧಿಸಿ, ಚಿತ್ರಗಳ ವಸ್ತುವಿಷಯದ ಕುರಿತು ವಿಶ್ಲೇಷಿಸಲಾಗಿದೆ. ಜಿಲ್ಲೆಯ ವ್ಯಾಪ್ತಿಯಲ್ಲಿ ಈಗಾಗಲೇ ಶೋಧವಾಗಿರುವ ಪ್ರಾಗಿತಿಹಾಸ ಚಿತ್ರಗಳಲ್ಲದೆ, ಕೆಲವು ಹೊಸ ಚಿತ್ರನೆಲೆಗಳನ್ನು

ಪತ್ತೆಮಾಡಲಾಯಿತು. ಇವುಗಳನ್ನೆಲ್ಲ ಅಧ್ಯಯನಕ್ಕೆ ಒಳಪಡಿಸಿ ಕೆಲವು ಪ್ರಮುಖ ಸಂಗತಿಗಳನ್ನು ಕಂಡುಕೊಳ್ಳಲಾಯಿತು.

ಪ್ರಾಗೈತಿಹಾಸಿಕ ಚಿತ್ರಪ್ರಕಾರಗಳಲ್ಲಿ ಸಾಮಾನ್ಯವಾಗಿ ಕಂಡುಬರುವಂತೆ ಬಯಲು ಬಂಡೆಯ ಚಿತ್ರಗಳು, ಗುಹಾಚಿತ್ರಗಳು ಎಂಬ ಎರಡು ಪ್ರಕಾರಗಳು, ಅದಲ್ಲದೆ ಬಯಲು ಬಂಡೆಯ ವರ್ಣರಹಿತ ಚಿತ್ರಗಳಲ್ಲಿ ಕುಟ್ಟಿದ ಚಿತ್ರಗಳು, ಕೊರೆದ ಚಿತ್ರಗಳೆಂಬ ವಿಧಗಳು ಹಾಗೂ ಗುಹೆಯಲ್ಲಿ ರಚನೆಯಾದ ವರ್ಣಚಿತ್ರಗಳಲ್ಲಿ ರೇಖಾಚಿತ್ರಗಳು, ಚಪ್ಪಟೆಯಾಗಿ ವರ್ಣಲೇಪಿಸಿದ ಚಿತ್ರಗಳೆಂಬ ಎರಡು ವಿಧಗಳಿವೆ ಎಂಬುದನ್ನು ತಿಳಿದುಕೊಳ್ಳಲಾಯಿತು.

ಈ ಭಾಗದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಸಾಮಾನ್ಯವಾಗಿ ಜಿಂಕೆ, ಗೂಳಿ, ಕಾಡೆಮ್ಮೆ, ಹುಲಿ, ಮೊಸಳೆ, ಕಾಡುಹಂದಿ, ಕಾಡುಕೋಣ, ನವಿಲು, ಮಂಗ, ಬೇಟೆಯಲ್ಲಿ ನಿರತ ವ್ಯಕ್ತಿಗಳು, ಕಾದಾಟದಲ್ಲಿ ತೊಡಗಿರುವ ವ್ಯಕ್ತಿಗಳು, ವಿವಿಧ ಭಂಗಿಗಳಲ್ಲಿ ಕುಣಿಯುತ್ತಿರುವ ಸ್ತ್ರೀಪುರುಷರು ಮುಂತಾದ ಚಿತ್ರಗಳು ಹೆಚ್ಚಾಗಿ ಕಂಡುಬಂದಿವೆ. ಕೆಲವು ನೆಲೆಗಳಲ್ಲಿ ಕೃಷಿಚಟುವಟಿಕೆಗಳಲ್ಲಿ ತೊಡಗಿದ ಜನರು, ಪಶುಪಾಲನೆ ಮಾಡುತ್ತಿರುವ ವ್ಯಕ್ತಿಗಳ ಚಿತ್ರಗಳು ಕಂಡುಬಂದಿವೆ. ಇದು ಆ ಕಾಲದ ಜನಜೀವನದ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಇಂತಹ ಅನೇಕ ಸಂಗತಿಗಳನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಯಿತು.

**ಐದನೆಯ** ಅಧ್ಯಾಯದಲ್ಲಿ ರಾಯಚೂರು ಜಿಲ್ಲೆಯ ಶಿಷ್ಟಪದ ಭಿತ್ತಿಚಿತ್ರಕಲೆಯ ಬಗ್ಗೆ ವಿಶ್ಲೇಷಿಸಲಾಗಿದೆ. ರಾಯಚೂರು ನಗರದ ಖಾಜನಗೌಡರ ವಾಡೆ ಮತ್ತು ಹನುಮಾನ ಮಂದಿರದ ಚಿತ್ರಗಳನ್ನು ಕುರಿತು ವಿವೇಚನೆ ಮಾಡಲಾಗಿದೆ. ಮೊದಲಿಗೆ ಶಿಷ್ಟಪದ ಭಿತ್ತಿಚಿತ್ರರಚನೆಯ ಅರ್ಥ, ವ್ಯಾಪ್ತಿಗಳನ್ನು ತಿಳಿಸಲಾಗಿದೆ. ನಂತರ ಖಾಜನಗೌಡರ ವಾಡೆ, ಮತ್ತು ಹನುಮಾನ್ ಮಂದಿರದ ಭಿತ್ತಿಚಿತ್ರಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ವಿವೇಚಿಸಲಾಗಿದೆ. ಜೊತೆಗೆ ಚಿತ್ರಗಳ ತಾಂತ್ರಿಕ ಅಂಶಗಳಾದ ರೇಖೆ, ಬಣ್ಣ, ಆಕಾರ, ಸ್ಥಳ ವಿಂಗಡಣೆ, ಸಂಯೋಜನೆ ಮುಂತಾದ ಸಂಗತಿಗಳನ್ನು ಚರ್ಚಿಸಲಾಗಿದೆ. ಸಾಂದರ್ಭಿಕವಾಗಿ ಚಿತ್ರ ಶೈಲಿ, ವೇಷಭೂಷಣ, ಪ್ರಭಾವ, ಪ್ರೇರಣೆಗಳಂತಹ ವಿಚಾರಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಖಾಜನಗೌಡರ ವಾಡೆಯಲ್ಲಿನ ಚಿತ್ರಗಳು ಮತ್ತು ಹನುಮಾನ್ ಮಂದಿರದಲ್ಲಿನ ಚಿತ್ರಗಳನ್ನು ಗಮನಿಸಿದಾಗ ಬೇರೆ ಬೇರೆ ಕಲಾವಿದರು ಚಿತ್ರರಚನೆ ಮಾಡಿರುವ ಸಾಧ್ಯತೆಯಿದೆ. ಬಣ್ಣಗಾರಿಕೆ, ರೇಖಾ ವಿನ್ಯಾಸ, ಆಕಾರಗಳು, ಸಂಯೋಜನೆ ಇಂತಹ ತಾಂತ್ರಿಕ ಅಂಶಗಳನ್ನು ಗಮನಿಸಿದಾಗ ಆ ಅಂಶ ಗಮನಕ್ಕೆ ಬರುತ್ತದೆ. ಇವುಗಳ ಜೊತೆಗೆ ಕಿನ್ನಾಳ ಕಲೆ, ಸುರಪುರ ಚಿತ್ರ ಶೈಲಿಗಳ ಜೊತೆಗೆ,

ರಾಯಚೂರು ಭಿತ್ತಿಚಿತ್ರಗಳನ್ನು ಸಾಂದರ್ಭಿಕವಾಗಿ ಅಲ್ಲಲ್ಲಿ ತೌಲನಿಕ ಚರ್ಚೆಗೆ ಒಳಪಡಿಸುವ ಮೂಲಕ ಅನೇಕ ಹೊಸ ಸಂಗತಿಗಳನ್ನು ಕಂಡುಕೊಳ್ಳಲಾಗಿದೆ.

ರಾಯಚೂರು ಖಾಜನಗೌಡರು ಬರೆಸಿದ ತಮ್ಮ ವಾಡೆಯ ಚಿತ್ರಗಳು ಮತ್ತು ಹನುಮಾನ್ ಮಂದಿರದ ಚಿತ್ರಗಳಲ್ಲಿ ಹೆಚ್ಚಾಗಿ ವೈಷ್ಣವ ಪರವಾಗಿರುವ ಚಿತ್ರಗಳಿವೆ. ಜೊತೆಗೆ ಅಲ್ಲಲ್ಲಿ ಸಾಮಾಜಿಕ ವಿವರಗಳನ್ನು ಚಿತ್ರಗಳ ಮೂಲಕ ಅನಾವರಣಗೊಳಿಸಲು ಪ್ರಯತ್ನಿಸಲಾಗಿದೆ. ಖಾಜನಗೌಡರು ಗುಲಬರ್ಗಾದ ಬಂದೇನವಾಜ್ ವರಪ್ರಸಾದದಿಂದ ಹುಟ್ಟಿದವರಾಗಿದ್ದರೂ, ತಮ್ಮ ವಾಡೆಯಲ್ಲಿ ಎಲ್ಲಿಯೂ ಮುಸ್ಲಿಂ ಧಾರ್ಮಿಕ ಹಿನ್ನೆಲೆಯ ಚಿತ್ರಗಳು ಕಂಡುಬರದಿರುವುದು ಆಶ್ಚರ್ಯವಾಗಿದೆ. ಪ್ರಾಣಿಪಕ್ಷಿಗಳ ಚಿತ್ರಣದ ವಿಷಯಕ್ಕೆ ಸಂಬಂಧಿಸಿದಂತೆ ಜಿಂಕೆ, ನವಿಲು, ಗಿಳಿ ಇವುಗಳು ಹೆಚ್ಚಾಗಿ ಚಿತ್ರಣಗೊಂಡಿವೆ. ಇಂತಹ ವಿವಿಧ ಸಂಗತಿಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

**ಆರನೆಯ** ಅಧ್ಯಾಯದಲ್ಲಿ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಮತ್ತು ಶಿಷ್ಟಪದ ಭಿತ್ತಿಚಿತ್ರಗಳನ್ನು ತೌಲನಿಕವಾಗಿ ವಿವೇಚಿಸಲಾಗಿದೆ. ಈ ಎರಡೂ ಕಲಾಪ್ರಕಾರಗಳ ಭಿತ್ತಿಸಿದ್ಧತೆ, ಬಣ್ಣ ತಯಾರಿಕೆ, ಕುಂಚ ತಯಾರಿಕೆ, ಚಿತ್ರರಚನಾ ವಿಧಾನಗಳು, ವಸ್ತುವಿಷಯಗಳಂತಹ ಸಂಗತಿಗಳನ್ನು ತೌಲನಿಕವಾಗಿ ವಿವೇಚಿಸಿ ಅನೇಕ ವಿಚಾರಗಳನ್ನು ಕಲೆಯ ಹಿನ್ನೆಲೆಯಲ್ಲಿ ಕಂಡುಕೊಳ್ಳಲಾಗಿದೆ.

ಪ್ರಾಗೈತಿಹಾಸಿಕ ಕಾಲದಲ್ಲಿ ಸೀಮಿತವಾದ ಕೆಲವೇ ವರ್ಣಗಳು ಬಳಕೆಗೊಂಡಿವೆ. ಮುಖ್ಯವಾಗಿ ಕೆಂಪು, ಹಳದಿ, ಬಿಳಿ ಮತ್ತು ಕಪ್ಪು ವರ್ಣಗಳ ಉಪಯೋಗ ಹೆಚ್ಚಾಗಿ ಕಂಡುಬರುತ್ತದೆ. ಆದರೆ ಶಿಷ್ಟಪದ ರಚನೆಯ ಸಂದರ್ಭದಲ್ಲಿ ಕೆಂಪು, ನೀಲಿ, ಹಳದಿ, ಹಸಿರು, ಬಿಳಿ, ಕಪ್ಪು, ವರ್ಣಗಳಲ್ಲದೆ ಮಿಶ್ರವರ್ಣಗಳ ವೈವಿಧ್ಯತೆ ಕಂಡುಬರುವುದು. ಚಿತ್ರದ ವಿಷಯಗಳಲ್ಲಿ ಪ್ರಾಗೈತಿಹಾಸಿಕ ಕಾಲದಲ್ಲಿ ಗೂಳಿ, ಜಿಂಕೆ, ಕಾಡೆಮ್ಮೆ, ಕಾಡುಕೋಣ, ಹುಲಿ, ಬೇಟೆಯ ದೃಶ್ಯಗಳು ಹೆಚ್ಚಾಗಿ ರಚನೆಗೊಂಡಿದ್ದರೆ, ಶಿಷ್ಟಪದ ಭಿತ್ತಿಚಿತ್ರ ರಚನೆಯ ಅವಧಿಯಲ್ಲಿ ಧಾರ್ಮಿಕ, ಸಾಮಾಜಿಕ, ಐತಿಹಾಸಿಕ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳು ರಚನೆಯಾಗಿರುವುದು ಕಂಡುಬರುತ್ತದೆ.

ಕುಂಚಗಳ ತಯಾರಿಕೆಯಲ್ಲಿ ಪ್ರಾಗೈತಿಹಾಸಿಕ ಜನರು ಸ್ವಾಭಾವಿಕವಾಗಿ ಲಭ್ಯವಾಗುವ ಸಸ್ಯದ ಕಾಂಡಗಳು, ಬೇರುಗಳು, ನಾರು ಎಳೆಗಳು, ಪ್ರಾಣಿಗಳ ಕೂದಲುಗಳನ್ನು ಬಳಸಿಕೊಳ್ಳುತ್ತಿದ್ದರು. ಶಿಷ್ಟಪದ ಭಿತ್ತಿಚಿತ್ರ ರಚನೆಯ ಕಾಲಾವಧಿಯಲ್ಲಿ ಮೇಲೆ ಹೇಳಿದ ಸ್ವಾಭಾವಿಕ ಸಸ್ಯದ ಭಾಗಗಳು ಮತ್ತು ಪ್ರಾಣಿಗಳ ಕೂದಲುಗಳನ್ನು ಸಂಸ್ಕರಿಸುವ ಮೂಲಕ ತಮಗೆ ಬೇಕಾದ ವಿವಿಧ ಆಕಾರ ಮತ್ತು ವಿನ್ಯಾಸದ

ಕುಂಚಗಳನ್ನು ತಯಾರಿಸಿಕೊಂಡು ಚಿತ್ರರಚನೆ ಮಾಡಿದ್ದಾರೆ. ಇಂತಹ ಅನೇಕ ಸಂಗತಿಗಳನ್ನು ಐದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಸಮಾರೋಪವಿದೆ. ಮೇಲಿನಂತೆ ಆರು ಅಧ್ಯಾಯಗಳಲ್ಲಿ ವಿಶ್ಲೇಷಣೆಗೊಂಡ ಈ ಪ್ರಬಂಧದಲ್ಲಿ ಅನೇಕ ಹೊಸ ವಿಚಾರಗಳನ್ನು ಕಂಡುಕೊಳ್ಳಲಾಗಿದೆ. ಕೆಲವು ಪ್ರಮುಖ ಸಂಗತಿಗಳು ಕೆಳಗಿನಂತಿವೆ.

**ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳು**

೧. ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲೆ ಎಂಬ ವಿಷಯದ ಈ ಪ್ರಬಂಧದಿಂದ ಕಲಾಕ್ಷೇತ್ರಕ್ಕೆ ಈ ಜಿಲ್ಲೆಯ ಕೊಡುಗೆಯನ್ನು ಗುರುತಿಸಲಾಗಿದೆ.

೨. ಆದಿಮಾನವ ಕಾಲದಿಂದ ಭಿತ್ತಿಚಿತ್ರಕಲೆಯು ಮಾನವನ ಸಂಸ್ಕೃತಿಯ ಭಾಗವಾಗಿ ಬೆಳೆದುಬಂದಿದ್ದು, ರಾಯಚೂರು ಜಿಲ್ಲೆಯಲ್ಲಿರುವ ಇಂತಹ ಚಿತ್ರನೆಲೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು. ಅಲ್ಲದೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವು ಹೊಸ ಚಿತ್ರನೆಲೆಗಳನ್ನು ಸಂಶೋಧಿಸಲಾಗಿದೆ.

೩. ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಲ್ಲಿ ಬಯಲು ಬಂಡೆಯ ವರ್ಣರಹಿತ ಚಿತ್ರಗಳು ಮತ್ತು ಗುಹಾವರ್ಣಚಿತ್ರಗಳೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡಿದ್ದರಿಂದಾಗಿ ಆಯಾ ಚಿತ್ರಗಳ ರಚನಾಕ್ರಮಗಳನ್ನು ತಿಳಿದುಕೊಳ್ಳಲು ಸಹಾಯವಾಗಿದೆ.

೪. ಪ್ರಾಗೈತಿಹಾಸಿಕ ಕಾಲದ ವರ್ಣತಯಾರಿಕೆ, ಕುಂಚಗಳ ಸ್ವರೂಪ, ವರ್ಣಲೇಪನ ವಿಧಾನ, ಚಿತ್ರ ರಚನಾ ಕ್ರಮಗಳನ್ನು ಈ ಅಧ್ಯಯನದಿಂದ ಗುರುತಿಸಿಕೊಳ್ಳಬಹುದಾಗಿದೆ.

೫. ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ವಸ್ತುವಿಷಯ, ತಾಂತ್ರಿಕ ಅಂಶಗಳ ಜೊತೆಗೆ ಚಿತ್ರಗಳ ಉದ್ದೇಶ, ಸಾಂಕೇತಿಕ ಚಿತ್ರಗಳು, ಮಂಡಲ ಚಿತ್ರಗಳು ವಿಶೇಷವಾಗಿ ಈ ಜಿಲ್ಲೆಯಲ್ಲಿ ಕಂಡುಬಂದಿದೆ.

೬. ರಾಯಚೂರು ಜಿಲ್ಲೆಯ ಶಿಷ್ಟಪದ ಭಿತ್ತಿಚಿತ್ರಗಳು ವಿಜಯನಗರ, ಕಿನ್ನಾಳ, ಸುರಪುರ ಕಲಾ ಶೈಲಿಗಳ ಪ್ರಭಾವಗಳಿಗೆ ಒಳಗಾಗಿದ್ದರೂ ಸ್ಥಳೀಯವಾದ ಜನಪದ ಅಂಶಗಳಿಂದಾಗಿ ತಮ್ಮದೇ ಪ್ರತ್ಯೇಕ ಶೈಲಿಯಲ್ಲಿ ರಚನೆಯಾಗಿರುವುದನ್ನು ಗುರುತಿಸಬಹುದಾಗಿದೆ.

೭. ರಾಯಚೂರಿನ ಖಾಜನಗೌಡರ ವಾಡೆ ಮತ್ತು ಹನುಮಾನ್ ಮಂದಿರದ ಭಿತ್ತಿಚಿತ್ರಗಳನ್ನು

ಖಾಜನಗೌಡರು ಬರೆಸಿದ್ದರೂ, ಶೈಲಿಯಲ್ಲಿ ಎರಡೂ ನೆಲೆಯ ಚಿತ್ರಗಳು ಬೇರೆ ಬೇರೆಯಾಗಿವೆ. ಅಲ್ಲದೆ ಬರೆಸಿದ ಕಾಲಮಾನವು ಸುಮಾರು ಇಪ್ಪತ್ತರಿಂದ ಮೂವತ್ತು ವರ್ಷಗಳ ಅಂತರವಿದೆ. ಇವುಗಳನ್ನು ಗಮನಿಸಿದಾಗ ಆಂಜನೇಯ ದೇವಾಲಯದ ಚಿತ್ರಗಳು ಹೆಚ್ಚು ಪ್ರಾಚೀನವಾಗಿವೆ ಎಂದು ಹೇಳಬಹುದು.

೮. ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ವಿಶೇಷತೆಯಿಂದ ಕೂಡಿವೆ. ಇಲ್ಲಿನ ಒಂದು ನೆಲೆಯಲ್ಲಿ ಕಂಡುಬಂದಿರುವ ಬಯಲು ಬಂಡೆಯ ಮೇಲೆ ರಚನೆಯಾದ ಹುಲಿಯ ಚಿತ್ರವು ಆಕರ್ಷಕವಾಗಿದೆ. ಇಲ್ಲಿ ಹುಲಿಯ ಕಾಲುಗಳನ್ನು ಕುಟ್ಟುವ ವಿಧಾನದಿಂದ, ಅದರ ಹೊಟ್ಟೆಯ ಭಾಗವನ್ನು ಕೊರೆಯುವ ವಿಧಾನದಿಂದ ರಚಿಸಿರುವುದು ಕಂಡುಬರುತ್ತದೆ. ಇಂತಹ ಚಿತ್ರಗಳು ಅಪರೂಪವಾಗಿವೆ.

೯. ರಾಯಚೂರು ಜಿಲ್ಲೆಯಲ್ಲಿ ಹುಲಿಯ ಚಿತ್ರಗಳು ಹೆಚ್ಚಾಗಿ ರಚನೆಯಾಗಿರುವುದನ್ನು ಗಮನಿಸಿದರೆ ಆಯಾ ಪರಿಸರದಲ್ಲಿ ಪ್ರಾಚೀನ ಕಾಲದಲ್ಲಿ ಅವುಗಳ ಸಂತತಿ ವಿಫಲವಾಗಿತ್ತು ಎಂದು ತಿಳಿದುಕೊಳ್ಳಬಹುದಾಗಿದೆ.

೧೦. ರಾಯಚೂರಿನ ಖಾಜನಗೌಡರ ಮನೆಯಲ್ಲಿ ಚಿತ್ರಗಳು ಮತ್ತು ಅವರೇ ಬರೆಸಿದ ಹನುಮಾನ್ ಮಂದಿರದ ಭಿತ್ತಿಚಿತ್ರಗಳನ್ನು ಅಧ್ಯಯನಕ್ಕೊಳಪಡಿಸಿದಾಗ ವೈಷ್ಣವ ಧರ್ಮದ ಪರವಾಗಿರುವ ಚಿತ್ರಗಳು ಹೆಚ್ಚಾಗಿ ಕಂಡುಬಂದಿವೆ.

ಪ್ರಸ್ತುತ ಪ್ರಬಂಧವು ರಾಯಚೂರು ಜಿಲ್ಲೆಯ ಭಿತ್ತಿಚಿತ್ರಕಲಾ ಪ್ರಕಾರಕ್ಕೆ ಮಾತ್ರ ಸೀಮಿತವಾಗಿರುವ ಅಧ್ಯಯನವಾಗಿದೆ. ಅಲ್ಲದೆ ಕಾಲಮಿತಿ, ಅಧ್ಯಯನ ಮಿತಿಗೊಳಪಟ್ಟಿರುವುದರಿಂದ ಇದರಲ್ಲಿ ಕೆಲವು ಸಂಗತಿಗಳು ಮಾತ್ರ ಚರ್ಚಿಸಲ್ಪಟ್ಟಿವೆ. ಈಗಾಗಲೇ ನಡೆದ ಪೂರಕ ಅಧ್ಯಯನಗಳನ್ನು ಬಳಸಿಕೊಂಡು ರಚಿಸಿರುವ ಈ ಕಿರುಪ್ರಬಂಧದಲ್ಲಿ ಅನೇಕ ಹೊಸ ವಿಚಾರಗಳು ಬೆಳಕುಕಂಡಿವೆ. ಆದರೂ ಸಹಿತ ಇದಕ್ಕೆ ತನ್ನದೇ ಆದ ಇತಿ–ಮಿತಿಗಳಿವೆ. ಈ ಹಿನ್ನೆಲೆಯಲ್ಲಿ ಇದು ಮುಂದಿನ ಅಧ್ಯಯನಕಾರರಿಗೆ ಮಾರ್ಗಸೂಚಿಯಾದರೆ ಅದು ಪ್ರಬಂಧದ ಸಾರ್ಥಕತೆಗಳಲ್ಲೊಂದು ಎಂದು ಹೇಳಬಹುದು.

❑❑❑

## ಅನುಬಂಧ – ೧
## ಸಂಕ್ಷೇಪಗಳು

| | | |
|---|---|---|
| ಕ.ವಿ.ವಿ.ಧಾ | : | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ಕ.ವಿ.ವಿ.ಹಂ | : | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಕ.ಲ.ಅ.ಬೆಂ | : | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ಕ.ಸಾ.ಪ.ಬೆಂ | : | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| ಮೈ.ವಿ.ವಿ. | : | ಮೈಸೂರು ವಿಶ್ವವಿದ್ಯಾಲಯ |
| ಚಿ.ಪ.ಬೆಂ | : | ಚಿತ್ರಕಲಾ ಪರಿಷತ್ತು, ಬೆಂಗಳೂರು |
| ಪ್ರ.ಮೈ.ವಿ.ವಿ. | : | ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ |
| ಪ್ರ.ಕ.ವಿ.ವಿ | : | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ |
| ಪು | : | ಪುಟ |
| ಅ.ಪ್ರ | : | ಅಪ್ರಕಟಿತ |
| ಮ.ಪ್ರ | : | ಮಹಾಪ್ರಬಂಧ |
| ಸಂ. | : | ಸಂಪಾದಕರು |
| ಪ್ರ.ಸಂ. | : | ಪ್ರಧಾನ ಸಂಪಾದಕರು |
| ಲೇ | : | ಲೇಖಕರು |
| ಸಂ.ಪ್ರ | : | ಸಂಪ್ರಬಂಧ |
| ಕಿ.ಪ್ರ | : | ಕಿರುಪ್ರಬಂಧ |

## ಅನುಬಂಧ – ೨
## ಗ್ರಂಥಋಣ


೦೧. **ಅಂದದ ಅರಮನೆಯ ಚಂದದ ಚಿತ್ರಗಳು** — **ಜಾವಿದ್ ಹುಸೇನ್**
ಅಪ್ರಕಟಿತ ಎಂ.ಫಿ.ಎ ಪದವಿಯ ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೭

೦೨. **ಉತ್ತರ ಕರ್ನಾಟಕದ ಭಿತ್ತಿಚಿತ್ರಗಳು – ಒಂದು ಅಧ್ಯಯನ** — **ಯಾದಪ್ಪ ಪರದೇಶಿ**
ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೦

೦೩. **ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ** — **ಫಾಲಾಕ್ಷ**
ಶಶಿ ಪ್ರಕಾಶನ, ತಿಪಟೂರು
೧೯೯೬

೦೪. **ಕರ್ನಾಟಕ ಚರಿತ್ರೆ (ಸಂಪುಟ–೧)** — **ಪ್ರೊ. ಷೇಕ್ ಅಲಿ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.
೨೦೦೫

೦೫. **ಕರ್ನಾಟಕದಲ್ಲಿ ಚಿತ್ರಕಲೆ** — **ಡಾ. ಶಿವರಾಮ ಕಾರಂತ**
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,
ಮೈಸೂರು
೧೯೭೧

೦೬. **ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ** — **ಕೆ. ವಿ. ಕಾಳೆ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,
ಹಂಪಿ.
೨೦೦೦

೦೭. **ಕರ್ನಾಟಕದ ಜನಪದ ಚಿತ್ರಕಲೆ** — **ಡಾ. ಎಸ್. ಸಿ. ಪಾಟೀಲ**
ವೀರಶೈವ ಅಧ್ಯಯನ ಸಂಸ್ಥೆ,
ಜಗದ್ಗುರು ತೋಂಟದಾರ್ಯ ಮಠ,
ಗದಗ–ಡಂಬಳ ೧೯೯೨

೦೮. **ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ** — **ಡಾ. ಅ. ಸುಂದರ**
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು ೧೯೯೫

೦೯. **ಕರ್ನಾಟಕದ ಭಿತ್ತಿಚಿತ್ರಕಲಾ ಪರಂಪರೆ** — **ಡಾ. ಅ. ಲ. ನರಸಿಂಹನ್**
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು ೧೯೯೮

೧೦. **ಕಲಾಕೋಶ** — **ಪ್ರಸಂ. ಪಿ. ಆರ್. ತಿಪ್ಪೇಸ್ವಾಮಿ**
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು
೧೯೯೪

೧೧. **ಕಲಾಪ್ರಪಂಚ** — **ಡಾ. ಶಿವರಾಮ ಕಾರಂತ**
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೯೭೮

೧೨. **ಚಿತ್ರಾಕ್ಷಿ** — **ಸಂ. ಡಾ. ಎಸ್. ಸಿ. ಪಾಟೀಲ**
ಡಿ. ವಿ. ಹಾಲಭಾವಿ ಸ್ಕೂಲ್ ಆಫ್ ಆರ್ಟ್
ಧಾರವಾಡ
೧೯೯೫

೧೩. **ನಿಜದನೆಲೆ** — **ಸಂ. ಡಾ. ಎಸ್. ಸಿ. ಪಾಟೀಲ, ಸತ್ಯಾನಂದ ಪಾತ್ರೋಟ**
**ಡಾ. ಬಿ. ಆರ್. ಹಿರೇಮಠರ ಅಭಿನಂದನಾ ಗ್ರಂಥ**
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ,
ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ
೨೦೦೩

೧೪. **ರಾಯಚೂರು ಜಿಲ್ಲಾ ದರ್ಶನ** — **ಸಂ. ಡಾ. ಮೃತ್ಯುಂಜಯ ಹೊರಕೇರಿ, ಡಾ. ಬಸವಲಿಂಗ ಸೊಪ್ಪಿಮಠ**
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,
ಗುಲಬರ್ಗಾ
೨೦೦೫

೧೫. **ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ** — **ಪುರುಷೋತ್ತಮ ಕೆ. ಎಸ್.**
ಅಪ್ರಕಟಿತ ಬಿ.ಎಫ್.ಎ ಕಿರುಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೬

೧೬. **ವರ್ಣಸಂಚಯ** — **ಡಾ. ಎಸ್. ಸಿ. ಪಾಟೀಲ**
ವಿಜಯ ಚಿತ್ರಕಲಾ ಮಹಾವಿದ್ಯಾಲಯ,
ಇಳಕಲ್
೨೦೦೧

❑❑❑

